# ಕನ್ನಡ ವಿಶ್ವವಿದ್ಯಾಲಯ
# ಹಂಪಿ

## "ಬೆಸಗರಹಳ್ಳಿರಾಮಣ್ಣನವರಕತೆಗಳಲ್ಲಿಗ್ರಾಮಜೀವನದಸೂಕ್ಷ್ಮಗಳು"

**ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ**


**ನಿಬಂಧಕಾರರು**

ರವಿಕುಮಾರ್ ಆರ್.

ಎಂ.ಫಿಲ್. ಪದವಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು.

**ಮಾರ್ಗದರ್ಶಕರು**

ಪ್ರೊ. ಕಾಳೇಗೌಡನಾಗವಾರ

ನಿವೃತ್ತ ಪ್ರಾಧ್ಯಾಪಕರು


2006-07

# ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್.ಪದವಿ ವಿದ್ಯಾರ್ಥಿಯಾಗಿ ಅಧ್ಯಯನ ಮಾಡುತ್ತಿರುವ ನಾನು ಎಂ.ಫಿಲ್.ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ **'ಬೆಸಗರಹಳ್ಳಿ ರಾಮಣ್ಣನವರ ಕತೆಗಳಲ್ಲಿ ಗ್ರಾಮಜೀವನದ ಸೂಕ್ಷ್ಮಗಳು'** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತೇನೆ. ಈ ಸಂಶೋಧನಾ ನಿಬಂಧವನ್ನು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲೀ ಯಾವುದೇ ಪದವಿ ಅಥವಾ ಡಿಪ್ಲೊಮೋಗಳಿಗಾಗಲಿ ನಾನು ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸ್ಥಳ : ಮೈಸೂರು**
**ದಿನಾಂಕ :** 28/7/2007

**ನಿಬಂಧಕರ ಸಹಿ**

ರವಿಕುಮಾರ್ ಆರ್.

**(ರವಿಕುಮಾರ್ ಆರ್.)**

# ಮಾರ್ಗದರ್ಶಕರ ಪ್ರಮಾಣ ಪತ್ರ

ನಿಬಂಧಕ, **ರವಿಕುಮಾರ್ ಆರ್.**, **ಎಂ.ಫಿಲ್.ಪದವಿ** ವಿದ್ಯಾರ್ಥಿ, ಅವರು ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್.ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ **'ಬೆಸಗರಹಳ್ಳಿ ರಾಮಣ್ಣನವರ ಕತೆಗಳಲ್ಲಿ ಗ್ರಾಮಜೀವನದ ಸೂಕ್ಷ್ಮಗಳು'** ಎಂಬ ಈ ವಿಷಯವನ್ನು ಸಿದ್ಧಪಡಿಸಿರುತ್ತಾರೆ. ಈ ನಿಬಂಧವನ್ನು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಬೇರಾವುದೇ ಪದವಿ ಅಥವಾ ಡಿಪ್ಲೊಮೋಗಳಿಗಾಗಿ ಒಪ್ಪಿಸಿಲ್ಲ.

**ಸ್ಥಳ : ಮೈಸೂರು**
**ದಿನಾಂಕ :** 28/07/2007

**ಮಾರ್ಗದರ್ಶಕರ ಸಹಿ**

**(ಪ್ರೊ. ಕಾಳೇಗೌಡ ನಾಗವಾರ)**

# ಕೃತಜ್ಞತೆಗಳು

**'ಬೆಸಗರಹಳ್ಳಿ ರಾಮಣ್ಣನವರ ಕತೆಗಳಲ್ಲಿ ಗ್ರಾಮಜೀವನದ ಸೂಕ್ಷ್ಮಗಳು'** ಎಂಬ ನಿಬಂಧವನ್ನು ರಚಿಸಲು ನನಗೆ ಸೂಕ್ತ ಮಾರ್ಗದರ್ಶನ ಹಾಗೂ ಸಲಹೆಗಳನ್ನು ನೀಡಿದ ಪೂಜ್ಯ ಗುರುಗಳಾದ **ಪ್ರೊ. ಕಾಳೇಗೌಡ ನಾಗವಾರ** ಅವರಿಗೆ ಹೃದಯಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ನಿಬಂಧದ ಬರಹದ ಪ್ರತಿಯನ್ನು ತಿದ್ದಿ ಕೆಲವು ಸಲಹೆ ಸೂಚನೆಗಳನ್ನು ನೀಡಿ ನಿಬಂಧ ಸರಿಯಾದ ರೀತಿಯಲ್ಲಿ ರಚನೆಯಾಗಲು ಸಹಕರಿಸಿದ ಬಿಸ್ಲೇಹಳ್ಳಿ ಪ್ರಭು ಹಾಗೂ ಚಿಕ್ಕಮಗಳೂರು ಗಣೇಶ್ ಅವರಿಗೂ ಗೌರವಪೂರ್ವಕ ವಂದನೆಗಳನ್ನು ತಿಳಿಸುತ್ತೇನೆ. ಅಲ್ಲದೆ ನನ್ನ ಎಲ್ಲಾ ಕೆಲಸ ಕಾರ್ಯಗಳಿಗೂ ಪ್ರೋತ್ಸಾಹ ನೀಡುತ್ತಿರುವ ತಂದೆ-ತಾಯಿಗಳಿಗೂ, ಅಕ್ಕಬಾವನವರಿಗೂ ಹಾಗೂ ನನ್ನ ಎಲ್ಲಾ ಸ್ನೇಹಿತರಿಗೂ ಈ ಮೂಲಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ಸ್ಥಳ : ಮೈಸೂರು**
**ದಿನಾಂಕ :** 28/7/2007

**ನಿಬಂಧಕರ ಸಹಿ**

ರವಿಕುಮಾರ್ ಆರ್.

**(ರವಿಕುಮಾರ್ ಆರ್.)**

# ಬೆಸಗರಹಳ್ಳಿ ರಾಮಣ್ಣನವರ ಕತೆಗಳಲ್ಲಿ ಗ್ರಾಮಜೀವನದ ಸೂಕ್ಷ್ಮಗಳು

## ಪರಿವಿಡಿ

## 1. ಕನ್ನಡ ಕಥಾ ಸಾಹಿತ್ಯದ ಹೆಜ್ಜೆ ಗುರುತುಗಳು

ಬೆಸಗರಹಳ್ಳಿ ರಾಮಣ್ಣನವರ ಸಣ್ಣಕತೆಗಳನ್ನು ಕುರಿತು ಚರ್ಚಿಸುವ ಮೊದಲು ಕನ್ನಡದಲ್ಲಿ ಸಣ್ಣಕತೆ ಪ್ರಕಾರ ಬೆಳೆದು ಬಂದ ಹಾದಿಯ ಸಿಂಹಾವಲೋಕನ ಮಾಡುವುದು ಉಚಿತವೆನಿಸುತ್ತದೆ. ಹೊಸಗನ್ನಡ ಸಾಹಿತ್ಯದಲ್ಲಿ ಇಂಗ್ಲೀಷ್ ಸಾಹಿತ್ಯ ಪ್ರಕಾರಗಳ ಬಳಕೆಯ ಬಿರುಸನ್ನು ಕಾಣುತ್ತೇವೆ. ಆಂಗ್ಲ ಮನೋಧರ್ಮದ ಪರಿಚಯವಾಗುವುದರ ಜೊತೆಗೆ ಇಂಗ್ಲೀಷ್ ಸಾಹಿತ್ಯದ ಪರಿಚಯವಾದುದಂತು ಯೋಗಾಯೋಗವೇ ಎನ್ನಬಹುದು. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತ, ಪ್ರಾಕೃತಗಳ ಪ್ರಭಾವವನ್ನು ಕಾಣುವಂತೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಆಂಗ್ಲಸಾಹಿತ್ಯದ ಪ್ರಭಾವವನ್ನು ಗುರುತಿಸುತ್ತೇವೆ. ಇಂದು ಆಧುನಿಕ ಕನ್ನಡ ಸಾಹಿತ್ಯ ಏನಾಗಿದೆಯೋ ಅದೆಲ್ಲವೂ ಆಂಗ್ಲ ಸಾಹಿತ್ಯದ ಪ್ರೇರಣೆ ಮತ್ತು ಪ್ರಭಾವದಿಂದ ಎಂದು ಹೇಳಿದರೆ ತಪ್ಪಾಗಲಾರದು. ಈ ಪ್ರೇರಣೆ, ಪ್ರಭಾವ ಎನ್ನುವುದು ಅಂಧಾನುಕರಣೆಯಾಗದೆ. ಕನ್ನಡ ಕವಿಗಳ ಸೃಜನಶೀಲ ಪ್ರತಿಭೆಯನ್ನು ವ್ಯಕ್ತಪಡಿಸುವುದಕ್ಕೆ ಸಹಕಾರಿಯಾಗಿದೆ ಎಂಬುದನ್ನು ಈ ಸಂದರ್ಭದಲ್ಲಿ ಮರೆಯಬಾರದು. ಆಂಗ್ಲ ಸಾಹಿತ್ಯ, ಸಂಸ್ಕೃತಿಯ ಪ್ರಭಾವ, ವೈಜ್ಞಾನಿಕ ವೈಚಾರಿಕ ಮನೋಧರ್ಮ, ಕವಿ ಪ್ರತಿಭೆಗೆ ಒದಗಿದ ಸ್ವಾತಂತ್ರ್ಯ ಮೊದಲಾದ ಅಂಶಗಳು 20 ನೇ ಶತಮಾನದಲ್ಲಿ ಹಲವಾರು ಸಾಹಿತ್ಯ ಪ್ರಕಾರಗಳು ಹುಟ್ಟುವುದಕ್ಕೆ ಕಾರಣವಾದವು. ಭಾವಗೀತೆ, ಸಣ್ಣಕತೆ, ಕಾದಂಬರಿ, ಜೀವನ ಚರಿತ್ರೆ, ಆತ್ಮಚರಿತ್ರೆ, ಪ್ರವಾಸ ಸಾಹಿತ್ಯ, ಪ್ರಬಂಧ ಸಾಹಿತ್ಯ ಹೀಗೆ ಹಲವಾರು ಸಾಹಿತ್ಯ ಪ್ರಕಾರಗಳ ಪರಿಚಯವಾಗುವುದರ ಜೊತೆಗೆ ಅವು ಕನ್ನಡ ಸಾಹಿತ್ಯದಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆದುಕೊಂಡವು. ಸಾಹಿತ್ಯ ನಿಂತ ನೀರಲ್ಲ. ಬದಲಾವಣೆಗೆ ಒಳಗಾಗುವುದು ಅದರ ಸಹಜ ಲಕ್ಷಣವೆಂದಾಗ, ಅನುಭವವನ್ನು ಹೊತ್ತು ಬರುವ ಸಾಹಿತ್ಯ ಪ್ರಕಾರಗಳು ಶಾಶ್ವತವಲ್ಲವೆಂದಂತಾಯಿತು. 'ಸಣ್ಣಕತೆ' ಪ್ರಕಾರವು ಹೆಸರೇ ಸೂಚಿಸುವಂತೆ ನಿರ್ದಿಷ್ಟ ಸಮಯದಲ್ಲಿ ಕೆಲವೇ ಪಾತ್ರ, ಸನ್ನಿವೇಶಗಳ ಮೂಲಕ ತನ್ನ

ಉದ್ದೇಶವನ್ನು ಸಾಧಿಸುತ್ತದೆ. "ಅಲ್ಪದಲ್ಲಿ ಕಲ್ಪವನ್ನು ಕೆತ್ತುವುದೇ" ಅದರ ವೈಶಿಷ್ಟ್ಯವಾಗಿದೆ. ಕತೆಯ ಬಗೆಗೆ ಮನುಷ್ಯನಿಗಿರುವ ಸಹಜವಾದ ಆಸಕ್ತಿಯೇ ಅದರ ಹುಟ್ಟು, ಬೆಳವಣಿಗೆಗೆ ಕಾರಣವಾಗಿದೆ. ಕನ್ನಡದಲ್ಲಿ ಈ ಪ್ರಕಾರವು ಸಾಹಿತ್ಯ ಚಳುವಳಿಗಳ ವಿವಿಧ ಘಟ್ಟಗಳಲ್ಲಿ ಬೆಳೆದು ಬಂದು ವೈಶಿಷ್ಟ್ಯ ಪೂರ್ಣವಾದ ಕೊಡುಗೆಯನ್ನು ನೀಡಿದೆ. ಕನ್ನಡದ ಪ್ರಮುಖ ಕತೆಗಾರರು ಪ್ರಬುದ್ಧವಾದ ಕತೆಗಳನ್ನು ಬರೆದಿದ್ದಾರೆ. ಹೀಗಾಗಿಯೇ ಕನ್ನಡದಲ್ಲಿ ಸಣ್ಣಕತೆಯ ಸ್ಥಾನ ಭದ್ರವಾಗಿ ನೆಲೆನಿಂತಿದೆ.

ಕನ್ನಡದಲ್ಲಿ ಹಲವಾರು ದಿನಪತ್ರಿಕೆ, ವಾರಪತ್ರಿಕೆ, ಪಾಕ್ಷಿಕ, ಮಾಸಿಕಗಳು ಪ್ರಕಟಗೊಳ್ಳುತ್ತಿವೆ. ಈ ಎಲ್ಲ ಪತ್ರಿಕೆಗಳಲ್ಲೂ ಯುವ ಬರಹಗಾರರು ಹೊಸ ಹೊಸ ಕತೆಗಳನ್ನು ಪ್ರಕಟಪಡಿಸುತ್ತಲೇ ಇರುತ್ತಾರೆ. ಅಲ್ಲದೆ ಶಾಲಾ–ಕಾಲೇಜುಗಳ ವಾರ್ಷಿಕ ಸಂಚಿಕೆ ಮೊದಲಾದ ಕಡೆಗಳಲ್ಲೂ ಸಣ್ಣಕತೆಗಳು ಮುದ್ರಣಗೊಳ್ಳುತ್ತಲೇ ಇವೆ. ಈ ಕಾರಣದಿಂದಾಗಿಯೇ ಕನ್ನಡದಲ್ಲಿ ರಚಿತವಾಗಿರುವ ಸಣ್ಣಕತೆಗಳ ಪರಿಪೂರ್ಣವಾದ ಅಂಕಿ ಅಂಶಗಳು ನಮಗೆ ದೊರಕುವುದಿಲ್ಲ. "ಹಿಂದಿನ ಕಾಲಕ್ಕೆ ಸಂಸ್ಕೃತದಲ್ಲಿ ಲೆಕ್ಕವಿಲ್ಲದಷ್ಟು ಸುಭಾಷಿತಗಳು ಜನ್ಮತಾಳಿದಂತೆ ಈಗಿನ ಕಾಲಕ್ಕೆ ಸಣ್ಣಕತೆಗಳು ಹುಟ್ಟುತ್ತವೆ".[1ಅ] ಹೀಗೆಂದ ಮಾತ್ರಕ್ಕೆ ರಚಿತವಾದ ಕತೆಗಳೆಲ್ಲವೂ ಶ್ರೇಷ್ಠ ಮಾದರಿಯವು ಎಂದು ಹೇಳಲಾಗುವುದಿಲ್ಲ. ಏಕೆಂದರೆ " ಇವುಗಳಲ್ಲಿ ಕೆಲವು ಪತ್ರಿಕೆಗಳ ಪುಟ ತುಂಬುವುದಕ್ಕಾಗಿ ಬರೆದವುಗಳು: ಕೆಲವು ಲೇಖಕರ ಅಡ್ಡವೃತ್ತಿಯ ಫಲದಿಂದ ಬಂದವುಗಳು; ಇನ್ನು ಕೆಲವು ತರುಣ ಬರಹಗಾರರ ಮೀಸಲು ಪ್ರಯತ್ನಗಳು; ಕೆಲವು ಮಾತ್ರ ಪರಿಪೂರ್ಣವಾದ ಸಾಹಿತ್ಯ ಕೃತಿಗಳಾಗಿವೆ".[2]

ಕನ್ನಡದಲ್ಲಿ ಸಣ್ಣಕತೆಗಳ ಇತಿಹಾಸ ಪಂಜೆಮಂಗೇಶರಾಯರಿಂದ 5ಆರಂಭವಾಗುತ್ತದೆ. ಮಂಗಳೂರಿನಲ್ಲಿ ಆರಂಭವಾದ "ಸುವಾಸಿನಿ" ಪತ್ರಿಕೆ ಪಂಜೆಯವರ ಸಾಹಿತ್ಯಕ್ಕೆ ಭೂಮಿಯಾಯಿತು. ಈ ಪತ್ರಿಕೆಯಲ್ಲಿ ಇವರು ಬಗೆದ

"ನನ್ನ ಚಿಕ್ಕತಂದೆ", "ನನ್ನ ಚಿಕ್ಕತಂದೆಯ ಉಯಿಲು", "ಕಮಲಾಪುರದ ಹೋಟ್ಲಿನಲ್ಲಿ", ಮುಂತಾದ ಸರಸ ವಿನೋದದ ಕತೆಗಳು ಪ್ರಕಟಗೊಂಡವು. ಪಂಜೆಯವರು ಕನ್ನಡದ ಪ್ರಥಮ ಕತೆಗಾರರಾಗಿರುವುದರಿಂದ ಸಾಮಾನ್ಯವಾಗಿಯೇ ಆರಂಭದ ತೊಡಕು ತೊಂದರೆಗಳು ಇವರ ಕತೆಗಳಲ್ಲಿ ಕಾಣಿಸಿಕೊಂಡಿವೆ. ಅಲ್ಲದೆ ಸಣ್ಣಕತೆಯ ಲಕ್ಷಣಗಳೆಲ್ಲವನ್ನು ಇವರ ಕತೆಗಳು ಒಳಗೊಂಡಿಲ್ಲ. ಆದರೆ ಅವರ ಸರಳವಾದ ಕಥನ ಶೈಲಿ ಇಂದಿಗೂ ಓದುಗರನ್ನು ಆಕರ್ಷಿಸುತ್ತಿದೆ. ಸರಿ ಸುಮಾರು ಪಂಜೆಯವರು ಬರೆಯುತ್ತಿದ್ದ ಕಾಲದಲ್ಲಿಯೇ ಮಂಗಳೂರಿನಲ್ಲಿ ಎಂ. ಎನ್. ಕಾಮತ್ ಅವರೂ, ಉತ್ತರ ಕರ್ನಾಟಕ ಭಾಗದಲ್ಲಿ ಕೆರೂರು ವಾಸುದೇವಾಚಾರ್ಯರು ಸಣ್ಣಕತೆಗಳನ್ನು ಬರೆಯುತ್ತಿದ್ದರು. ಕೆರೂರು ಪಂಜೆಯವರಿಗಿಂತ ಹೆಚ್ಚು ಕತೆಗಳನ್ನು ಬರೆದಿದ್ದು ಅವುಗಳನ್ನು ಐತಿಹಾಸಿಕ, ಸಾಮಾಜಿಕ, ಪತ್ತೇದಾರಿ ಕತೆಗಳಾಗಿ ವಿಂಗಡಿಸಬಹುದಾಗಿದೆ. ಅಂದಿನ ಕಾಲದ ಸಾಮಾಜಿಕ ಜೀವನದ ಒಳಿತು–ಕೆಡುಕುಗಳಿಗೆ ಕನ್ನಡಿ ಹಿಡಿಯುವುದು ಇವರ ಕತೆಗಳ ಪ್ರಮುಖ ಉದ್ದೇಶವಾಗಿದೆ.

ಸಣ್ಣಕತೆಗಳಲ್ಲಿ ಮಾಸ್ತಿಯವರದು ಕಿರೀಟಪ್ರಾಯವಾದ ಹೆಸರಾಗಿದೆ. ಸಣ್ಣಕತೆ, ನೀಳ್ಗತೆ, ಕಥನಕಾವ್ಯ, ಮೊದಲಾದ ರೂಪಗಳಲ್ಲಿ ಕತೆಗಳನ್ನು ಬರೆಯುವುದರ ಮೂಲಕ ವೈವಿಧ್ಯತೆಯನ್ನು ತಂದುಕೊಟ್ಟರು. "ಅವರ ರಂಗಪ್ಪನ ಕತೆಗಳು ನಿಸ್ಸಂದೇಹವಾಗಿ ಹೊಸ ಸಾಹಿತ್ಯಲೋಕವೊಂದನ್ನು ತೆರೆದು ತೋರಿದವು. ಈಗ ನಾವು ನೋಡುತ್ತಿರುವ ಸಣ್ಣಕತೆಗಳ ಪ್ರಪಂಚದಲ್ಲಿ ಅವರೇ ಮೊದಲಿಗರಾಗಿದ್ದಾರೆ. ಶ್ರೀನಿವಾಸರು ಕನ್ನಡದಲ್ಲಿ ತೀರ ಅಪರೂಪವಾಗಿರುವ ಶ್ರೇಷ್ಠ ದರ್ಜೆಯ ಗದ್ಯಲೇಖಕರಲ್ಲಿ ಒಬ್ಬರಾಗಿದ್ದಾರೆ. ಸಣ್ಣಕತೆಯ ರೂಪದಲ್ಲಿ ಮಾತ್ರ ಪ್ರಕಟಿಸಬಹುದಾದ ಜೀವನವೇ ಅವರೆದುರಿಗೆ ಕಾದು ಕುಳಿತಿತ್ತೇನೋ ಎಂಬಂತೆ ಶ್ರೀನಿವಾಸರ ವಸ್ತು ತನ್ನ ಬಾಹ್ಯ ಸ್ವರೂಪಕ್ಕೆ ಸಹಜವಾಗಿ ಹೊಂದಿಕೊಂಡುಬಿಟ್ಟಿದೆ. ಅವರ ಹಿಂದಾದ ಜೀವನ ದೃಷ್ಟಿ ಈ ಎಲ್ಲ ಕತೆಗಳಿಗೂ ಅರ್ಥಪೂರ್ಣತೆಯನ್ನು

ತಂದುಕೊಟ್ಟಿದೆ. ಹೊಸಗನ್ನಡ ನವೋದಯದ ಕಾಲದಲ್ಲಿ ಎಲ್ಲ ಲೇಖಕರೂ ಭಾವೋದ್ವೇಗದ ಕಾವಿನಲ್ಲಿಯೇ ಸಾಹಿತ್ಯವನ್ನು ಸೃಷ್ಟಿಸುತ್ತಿದ್ದಾಗ ಶ್ರೀನಿವಾಸರೊಬ್ಬರು ಮಾತ್ರ ಸ್ವಸ್ಥಚಿತ್ತದ ಲೇಖಕರಾಗಿ ಉಳಿದಿರುವುದು ಸೋಜಿಗದ ಮಾತಾಗಿದೆ. ಭಾವನೆಯ ಸೆಳೆತಕ್ಕೆ ತಾವು ಸಿಕ್ಕದೆ, ಅದನ್ನು ಜೀವನದ ಒಂದು ಪ್ರಬಲಶಕ್ತಿಯೆಂದು ಮಾತ್ರ ಅವರು ಕಂಡಿದ್ದಾರೆ. ಶ್ರೀನಿವಾಸರ ಸಾಹಿತ್ಯದ ಹಿರಿಮೆಯ ರಹಸ್ಯ ಅವರ ಈ ಸಮಾಧಾನದಲ್ಲಿಯೇ ಇದೆಯೆಂದು ಹೇಳಬಹುದು. ರಂಗಪ್ಪ, ರಾಮಸ್ವಾಮಿ, ರಂಗಸಾಮಿ, ವೆಂಕಟಶಾಮಿ, ಉಗ್ರಪ್ಪ, ಜೋಗ್ಯೋರ ಅಂಜಪ್ಪ, ವೇಲೂರಿನ ಲಕ್ಷಮ್ಮ, ಮೇಷ್ಟರ ಹೆಂಡತಿ ಇವರೆಲ್ಲ ನಾವು ದಿನನಿತ್ಯ ಕಾಣುವ ವ್ಯಕ್ತಿಗಳು: ಒಮ್ಮೆ ಕಂಡಿದ್ದರೆ ಮುಂದೆ ಮರೆತುಬಿಡಬಹುದಾದ ವ್ಯಕ್ತಿಗಳು, ಅವರ ಜೀವನದಲ್ಲಿ ನಡೆಯುವ ಘಟನೆಗಳಾಗಲಿ, ಅವರ ಅನುಭವಗಳಾಗಲಿ ತೀರ ಸಾಮಾನ್ಯವಾದವುಗಳಾಗಿವೆ. ಮಾಸ್ತಿಯವರ ಕಣ್ಣಿಗೆ ಈ ಸಾಮಾನ್ಯತೆಯ ಹಿಂದೆಯೇ ವಿಶೇಷವಾದದ್ದೇನೋ ಕಾಣುತ್ತದೆ. ನಾವು ದಿನನಿತ್ಯ ಓಡಾಡುವ ನೆಲದ ಕೆಳಗೇ ಭೂಗರ್ಭಶಾಸ್ತ್ರಜ್ಞ ಬಂಗಾರದ ನೆಲೆಯನ್ನು ಗುರುತಿಸುವಂತೆ ಲೇಖಕರು ಈ ವ್ಯಕ್ತಿಗಳ ಜೀವನದ ಹಿಂದಿನ ಉನ್ನತಿಯನ್ನು ತಟ್ಟನೆ ಗುರುತಿಸುತ್ತಾರೆ".[3]

ಮಾಸ್ತಿಯವರ ಮೊದಲ ಕಥಾಸಂಕಲವು ಪ್ರಕಟವಾದ ಬಳಿಕ ಅದರಿಂದ ಪ್ರೇರಣೆ ಪಡೆದು ಸಣ್ಣಕತೆಗಳನ್ನು ಬರೆಯಲು ಪ್ರಾರಂಬಿಸಿದವರಲ್ಲಿ ಆನಂದ, ಭಾರತೀಪ್ರಿಯ, ಎಮ್.ವಿ.ಸೀತಾರಾಮಯ್ಯ, ಗೊರುರುರಾಮಸ್ವಾಮಿಅಯ್ಯಂಗಾರ್, ಮೊದಲಾದವರು ಪ್ರಮುಖರಾಗಿದ್ದಾರೆ. ಆನಂದರದು ಕನ್ನಡ ಕಥಾಲೋಕದಲ್ಲಿ ಶಾಶ್ವತವಾಗಿ ನಿಲ್ಲುವ ಹೆಸರಾಗಿದೆ. "ಸಣ್ಣಕತೆಯ ಆಧುನಿಕ ತಂತ್ರವು ಅವರ ಹಲವು ಕತೆಗಳಲ್ಲಿ ಸಫಲವಾಗಿದೆಯೆನ್ನಲು ಅಡ್ಡಿಯಿಲ್ಲ. ರಚನೆಯ ಬಿಗಿಕಟ್ಟು, ಸಂಭಾಷಣೆಯ ಚಾತುರ್ಯ, ಸಂಕ್ಷೇಪದ ಸ್ವಾರಸ್ಯ, ಕೊನೆಯ ಆಶ್ಚರ್ಯ ಈ ಎಲ್ಲದರಲ್ಲಿ ಅವರು ಯಶಸ್ವಿಗಳಾಗಿದ್ದಾರೆ. ಏನಾಗುವುದೋ ಏನೋ ಎನಿಸುವಂತೆ ಕತೆಯನ್ನು ಹಿಂಜಿ ಹಿಂಜಿ ಕೊನೆಗೆ ಅನರೀಕ್ಷಿತ ಅಂತ್ಯವನ್ನು ಕಲ್ಪಿಸುವುದರಲ್ಲಿ

ಅವರು ಜಯಶಾಲಿಗಳೆಂದು ಹೇಳಬೇಕು. ಮಾಟಗಾತಿ, ಹೆಂಡತಿಯ ಕಾಗದ, ಇದಕ್ಕೆ ಉದಾಹರಣೆಯಾಗಿವೆ. ಆದರೆ ಈ ತಂತ್ರ-ನೈಪುಣ್ಯ ಪ್ರಯತ್ನಪೂರ್ವಕ, ಕೃತಕ ಎಂಬ ಭಾವವೂ ಕ್ವಚಿತ್ತಾಗಿ ಬರುತ್ತದೆ. ಸಂಭಾಷಣೆಯಲ್ಲಿಯ ಅತಿವಿಸ್ತರ ಇಲ್ಲವೆ ಅತಿವಕ್ರವಿಲಾಸ ಕೆಲವು ಸಲ ಕಣ್ಣಲ್ಲಿ ಒತ್ತುವುದುಂಟು. ಸರಸದಾಂಪತ್ಯ, ಶುಚಿಯಾದ ಶೃಂಗಾರ, ಶಿಶುಮನ, ಇವನ್ನು ಬಣ್ಣಿಸುವುದರಲ್ಲಿ ಆನಂದರು ಕುಶಲಿಗಳಾಗಿದ್ದಾರೆ. ಜೊತೆಗೆ ಸಾಮಾಜಿಕ ಸಮಸ್ಯೆ, ಅದರಿಂದ ಉಂಟಾಗುವ ದುರಂತ ಇವನ್ನು ಅವರು ಕಲಾಮಯವಾಗಿ ಬಣ್ಣಿಸಿದ್ದಾರೆ. "ನಾನು ಕೊಂದ ಹುಡುಗಿ" ಅವರ ಈ ಬಗೆಯ ಕೃತಿಗಳಲ್ಲಿ ಶ್ರೇಷ್ಠವೆಂದು ತಿಳಿಯಬೇಕು"[4] ಕೊಡಗಿನ ಗೌರಮ್ಮ ತಮ್ಮ ಸಣ್ಣಕತೆಗಳ ಮೂಲಕ ಹೆಣ್ಣಿನ ಬಾಳಿನ ದುಃಖ, ದುಮ್ಮಾನಗಳನ್ನು ಮನಮಿಡಿಯುವಂತೆ ಚಿತ್ರಿಸಿದ್ದಾರೆ. ಭಾರತದಂತಹ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯೊಬ್ಬಳ ಅನುಭವಗಳು ಕತೆಗಳಾಗಿ ರೂಪುಗೊಂಡಿರುವುದರಿಂದ ಅವುಗಳಿಗೆ ವಾಸ್ತವತಾ ನೆಲೆ ಪ್ರಾಪ್ತಗೊಂಡಿದೆ. ಗೊರೂರು ರಾಮಸ್ವಾಮಿ ಅಯ್ಯಂಗಾರರು ಬರೆದ ಕತೆಗಳು ಸಂಖ್ಯೆಯಲ್ಲಿ ಕಡಿಮೆಯಾದರೂ ಅವುಗಳಲ್ಲಿ ಹಳ್ಳಿಯ ಬಾಳಿನ ಹಲವು ಮುಖಗಳು ಸಮರ್ಥವಾಗಿ ಬಿಂಬಿತವಾಗಿವೆ. ಕುವೆಂಪು ಅವರು ಕಥಾ ಪ್ರಕಾರದಲ್ಲಿ ಹೆಚ್ಚು ಕೃಷಿ ಮಾಡದಿದ್ದರೂ "ಧನ್ವಂತರಿಯ ಚಿಕಿತ್ಸೆ", "ಸಾಲದ ಮಗು", "ಯಾರೂ ಅರಿಯದ ವೀರ', 'ಮಲೆನಾಡ ಪಿಶಾಚ', ಮೊದಲಾದ ಅತ್ಯುತ್ತಮ ಕತೆಗಳನ್ನು ರಚಿಸಿದ್ದಾರೆ. ಇಡೀ ಪ್ರಪಂಚದ ಭಾರವನ್ನು ಹೊತ್ತು ನರಳುತ್ತಿರುವ ರೈತನ ಚಿತ್ರ 'ಧನ್ವಂತರಿಯ ಚಿಕಿತ್ಸೆ'ಯಲ್ಲಿ ಮನಮಿಡಿಯುವಂತೆ ಚಿತ್ರಿತವಾಗಿದೆ. ಅಧಿಕಾರಿಗಳೂ ಡಾಕ್ಟರುಗಳೂ ಪುರೋಹಿತರೂ ಸಮಾಜದ ರಕ್ಷಣೆ ಹೊರಬೇಕಾದ ಜವಾಬ್ದಾರಿಯುತ ಜನಗಳು ನಾಡಿನ ಜನರ ಬಾಳಿಗೆ ಬೆಳಕಾಗಬೇಕಾದ ಅವರೇ ಅವರ ರಕ್ತವನ್ನು ಹೀರುವ ರಾಕ್ಷಸರಾಗಿ ಪರಿಣಮಿಸಿದ್ದರು ಎಂಬುದನ್ನು ಮಾರ್ಮಿಕವಾಗಿ ಕುವೆಂಪು ನಮ್ಮ ಮುಂದಿರಿಸಿದ್ದಾರೆ. ಶಿವರಾಮ ಕಾರಂತ, ಬೇಂದ್ರೆ, ದೇವುಡು, ಪು.ತಿ.ನ. ಮೊದಲಾದವರು ಉಳಿದ ಸಾಹಿತ್ಯ

ಪ್ರಕಾರಗಳಲ್ಲಿ ಹೆಸರು ಪಡೆದವರಾಗಿದ್ದರೂ ಉತ್ತಮವಾದ ಕೆಲವು ಕತೆಗಳನ್ನಾದರೂ ರಚಿಸಿದ್ದಾರೆ.

ಪ್ರಗತಿಶೀಲ ಸಾಹಿತ್ಯ ಚಳುವಳಿಯು ಕಾವ್ಯಕ್ಕಿಂತಲೂ ಹೆಚ್ಚಾಗಿ ಗದ್ಯಕ್ಕೆ ಹೆಚ್ಚಿನ ಒತ್ತು ಕೊಟ್ಟಿತು. ನವೋದಯ, ನವ್ಯ, ದಲಿತ, ಬಂಡಾಯ ಚಳುವಳಿಗಳು ಕಾವ್ಯದ ಮೂಲಕ ಆರಂಭಗೊಂಡರೆ ಪ್ರಗತಿಶೀಲತೆಯ ಆಂದೋಲನ ಸಣ್ಣಕತೆಯ ಮೂಲಕ ಪ್ರಾರಂಭಗೊಂಡಿತು. 'ಪ್ರಗತಿಶೀಲ' ಎನ್ನುವ ಮನೋಧರ್ಮವೇ ಕಾವ್ಯವನ್ನು ನಿರಾಕರಿಸುವಂತಹದ್ದಾಗಿದೆ. ಕಾರಣ ಕಾವ್ಯ ಸಂಗೀತದ ಮೂಲಕ ಲಾಲಿ ಹಾಡಿ ಮೈಮರೆಸುತ್ತದೆ. "1936 ರಿಂದ 42 ರವರೆಗೆ ನಡೆದ ರಾಜಕೀಯ ಆಂದೋಲನಗಳು, ಪತ್ರಿಕೆಗಳಲ್ಲಿ ನಡೆಯುತ್ತಿದ್ದ ಪ್ರಗತಿಶೀಲತೆಯ ಪ್ರಚಾರ, ರಶಿಯನ್ ಹಾಗೂ ಹಿಂದಿ ಕತೆಗಳ ಅನುವಾದ ಪ್ರಗತಿಶೀಲತೆಯ ವಾತಾವರಣವನ್ನು ತಾತ್ಪೂರ್ತಿಕವಾಗಿಯಾದರೂ ನಮ್ಮಲ್ಲಿ ನಿರ್ಮಿಸಿದವು".[5]

ಪ್ರಗತಿಶೀಲ ಸಾಹಿತ್ಯ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಆವರೆಗೆ ಕಾಣದಿದ್ದ ಕೇಂದ್ರ ಭಾವವೊಂದನ್ನು ತಂದುಕೊಟ್ಟಿತು–ರೋಷ, ಸುತ್ತಲಿನ ಸಮಾಜದ ಕೊಳೆಯನ್ನು ತೊಡೆದು ಹಾಕುವ ಛಲದಿಂದ ಬರೆದ ಪ್ರಗತಿಶೀಲರು ಗೌರವಸ್ಥರು ಬಚ್ಚಿಡುವ ವಿಷಯಗಳನ್ನು ಆರಿಸಿ ಬರೆದರು. ಆಷಾಡಭೂತಿತನವನ್ನು ಬಯಲಿಗೆಳೆಯುಲು ಬರೆದರು. ಲೈಂಗಿಕ ಜೀವನದಲ್ಲಿ ಮೋಸ ಹೆಚ್ಚಾಗಿ ನಡೆಯುವುದರಿಂದ ಇದು ಅನೇಕ ಸಣ್ಣಕತೆಗಳ ವಸ್ತುವಾಯಿತು. ಮಠಗಳಲ್ಲಿ ದೇವಾಲಯಗಳಲ್ಲಿ, ಮನೆಗಳಲ್ಲಿ ನಡೆಯುವ ಮೋಸ ದುಷ್ಟಾಚಾರಗಳನ್ನು ಬೆತ್ತಲುಗೊಳಿಸಿದರು. ಮಠಗಳಲ್ಲಿ, ಕಾರ್ಖಾನೆಗಳಲ್ಲಿ ನಡೆಯುವ ಶೋಷಣೆಗಳನ್ನು ಎತ್ತಿ ತೋರಿಸಿದರು. ಈ ಕಾಲಘಟ್ಟದ ಎಲ್ಲ ಸಣ್ಣಕತೆಗಳ ಉದ್ದೇಶ ಜೀವನದ ನಗ್ನ ಸತ್ಯವನ್ನು ನಿರೂಪಿಸುವುದಾಗಿರುತ್ತದೆ. ಸುಮಾರು ಎಂಟು ವರ್ಷಗಳ ಕಾಲ

ಪ್ರಗತಿಶೀಲ ಚಳುವಳಿ ಕನ್ನಡ ಸಾಹಿತ್ಯದಲ್ಲಿ ಒಂದು ಜೀವಂತಶಕ್ತಿ ಎಂಬಂತೆ ತೋರುತ್ತಿತ್ತು.

"ಪ್ರಗತಿವಾದ ಕನ್ನಡದ ಸಾಮಾಜಿಕ ಜೀವನಕ್ಕೆ ಸಹಜವಾಗಿ ಹೊಂದಿಕೊಳ್ಳಲಿಲ್ಲ ಇದಕ್ಕೆ ಪ್ರಮುಖ ಕಾರಣವೆಂದರೆ ಅದು ಅನುಭವದಿಂದ ದೂರವಾಗಿ ಉಳಿದದ್ದು. ದೀನದಲಿತರ ಬಗ್ಗೆ, ಒಕ್ಕಲಿಗನ ಬಗ್ಗೆ, ಸಾಹಿತ್ಯ ಹುಟ್ಟಲೇಬಾರದೆಂದು ಈ ಮೊದಲ ಯಾರೂ ಕಟ್ಟಳೆಯನ್ನು ಹಾಕಿರಲಿಲ್ಲ. ಆದರೆ ಅದೊಂದೇ ನೆವವನ್ನು ಮುಂದೆ ಒಡ್ಡಿ 'ಪ್ರಗತಿಶೀಲತೆ' ಹಳೆಯ ಸಾಹಿತ್ಯಕ್ಕೆತ ಅಂಶತಃ ಆಗಿಯೇ ಆಗಲಿ, ಪ್ರತಿಕ್ರಿಯೆಯನ್ನು ತೋರಿಸಲಾರಂಭಿಸಿತು. ಪ್ರಗತಿಶೀಲರ ದೃಷ್ಟಿಯಿಂದ ಹಳೆಯ ಸಾಹಿತ್ಯವೆಲ್ಲ ಭೂರ್ಜ್ವಾವಾಯಿತು. ಮತ್ತು ಇಂಥ ವಾದಗಳಿಗೆ ಆಕರ್ಷಿತರಾದ ತರುಣ ಬರಹಗಾರರನೇಕರು ಕೇವಲ ಮನೋಧರ್ಮದ ಕಾವಿನಿಂದಲೇ ಸಾಹಿತ್ಯರಂಗಕ್ಕಿಳಿದರು. ಅನುಭವಕ್ಕಿಂತ ದೃಷ್ಟಿಕೋನ ಹೆಚ್ಚು ಮಹತ್ವವನ್ನು ಪಡೆಯಿತು. ಸಾಹಿತ್ಯದ ಯಾವುದೇ ಆಂದೋಲನವಾಗಲಿ ಅನುಭವವನ್ನು ಬಿಟ್ಟು ದೃಷ್ಟಿಕೋನವನ್ನಷ್ಟೇ ಅವಲಂಬಿಸಿದರೆ ಇಲ್ಲದ ಗೊಂದಲಕ್ಕೆ ಅಸ್ಪದವಿತ್ತಂತಾಗುತ್ತದೆ. ಅದಕ್ಕಾಗಿಯೇ ಪ್ರಗತಿಶೀಲರ ಮೊದಮೊದಲಿನ ಕತೆಗಳಲ್ಲಿಯ ಪಾತ್ರಗಳು ಪರಕೀಯವಾಗಿ ಕಾಣತೊಡಗಿದವು. ಆದರೆ ಈ ಹೊಸ ಮನೋಧರ್ಮದಿಂದ ಸಣ್ಣಕತೆಗಳಲ್ಲಿ ಬದಲಾವಣೆ ಬಂದಿತು. ಹೊಸ ಕತೆಗಳು ಹಳೆಯ ಕತೆಗಳಿಗಿಂತ ಹೆಚ್ಚು ವೇಗವನ್ನು ಪಡೆದವು; ಸಂಭಾಷಣೆ ಹೆಚ್ಚು ಚುರುಕಾಯಿತು; ಮುಗಿತಾಯ ಹೆಚ್ಚು ಅನಿರೀಕ್ಷಿತವಾಯಿತು. ಮತ್ತು ಕತೆಗಳ ಒಳಮೈಯಾಗಿ, ಪಾತ್ರ ಸೃಷ್ಟಿಯ ಮನೋಲೋಕವಾಗಿ ಒಂದು ಆತಪ್ತ ವಾತಾವರಣ ಹುಟ್ಟಿಕೊಂಡಿತು. ಮುಖ್ಯವಾಗಿ ಕತೆಗಳಲ್ಲ ಸಮಸ್ಯೆಗಳ ಚರ್ಚೆ, ಪರಿಹಾರಗಳಿಗೆ ತೊಡಗಿದವು. ಪ್ರತಿಯೊಂದು ಹೊಸಕತೆಯಲ್ಲಿಯೂ ಒಂದು ಸಮಸ್ಯೆ ಚಿಗುರಲಾರಂಭಿಸಿತ".[6] ಈ ದಿಕ್ಕಿನಲ್ಲಿ ಅ.ನ.ಕೃ. ರವರ 'ಅನ್ನದ ಕೂಗು',

ಬಸವರಾಜ ಕಟ್ಟೀಮನಿ ಅವರ 'ಗಿರಿಜಾ ಕಂಡ ಸಿನಿಮಾ', ನಿರಂಜನರ 'ಕೊನೆಯ ಗಿರಾಕಿ' ಕತೆಗಳನ್ನು ಹೆಸರಿಸಬಹುದು.

ನಿರಂಜನರ 'ಕೊನೆಯ ಗಿರಾಕಿ' ವೇಶ್ಯಾ ಸಮಸ್ಯೆಯನ್ನು ಚಿತ್ರಿಸುವ ಧ್ವನಿಪೂರ್ಣ ಕತೆಯಾಗಿದೆ. ಅನ್ನದ ಸಮಸ್ಯೆಯಿಂದಾಗಿ ಸೂಳೆಯಾಗುವ ಕಾಣೆಯ ಜೀವನ ಕರುಳು ಬಿರಿಯುವಂತೆ ಚಿತ್ರಣಗೊಂಡಿದೆ. ಸಮಾಜ ಆಕೆಯನ್ನು ನಡೆಸಿಕೊಂಡ ರೀತಿಯಂತೂ ಘೋರವಾದುದಾಗಿದೆ. ಅನಾಥಳಾಗಿ ಹುಟ್ಟಿದ ಕಾಣೆಯ ದೇಹ ಯೌವನದಿಂದ ಮರಣದವರೆಗೂ ಕಾಮುಕರಿಗೆ ಬಲಿಯಾಯಿತು. ಸತ್ತ ನಂತರವೂ ಸಂಸ್ಕಾರವನ್ನು ಕಾಣದ ಕಾಣೆಯ ದೇಹಕ್ಕೆ ಹದ್ದು ಕೊನೆಯ ಗಿರಾಕಿಯಾಗುತ್ತದೆ. ಈ ನಿಟ್ಟಿನಲ್ಲಿ 'ಕೊನೆಯ ಗಿರಾಕಿ' ಕತೆ ಕನ್ನಡದ ಉತ್ತಮ ಕತೆಗಳ ಸಾಲಿಗೆ ಸೇರುತ್ತದೆ. ಬಸವರಾಜ ಕಟ್ಟೀಮನಿ ಅವರ 'ಗಿರಿಜಾ ಕಂಡ ಸಿನಿಮಾ' ಅಸಮಾನತೆಯ ಅಂತರವನ್ನು ನೈಜವಾಗಿ ಚಿತ್ರಿಸುತ್ತದೆ. ಸಮಾಜದ ನೂರು ಅನ್ಯಾಯಗಳನ್ನು ಪ್ರತಿಭಟಿಸುವುದೇ ಇವರ ಕತೆಗಳ ಉದ್ದೇಶವಾಗಿದೆ.

ಈ ಮೊದಲೇ ಹೇಳಿದಂತೆ 'ಪ್ರಗತಿಶೀಲತೆ'ಯ ಕಾವು ತಕ್ಕ ವಾತಾವರಣವಿಲ್ಲದೆ ಆರಿಹೋದಾಗ ಹೊಸ ಮನೋಧರ್ಮದ ಸಾಹಿತ್ಯ ಮೊಳಕೆಯೊಡೆಯಲಾರಂಭಿಸಿತು. ಅದೇ ನವ್ಯ ಸಾಹಿತ್ಯ ವಸ್ತು, ಭಾಷೆ, ತಂತ್ರ, ಶೈಲಿಗಳ ದೃಷ್ಟಿಯಿಂದಾಗಿ ನವ್ಯ ಕಥೆಗಳು ಪ್ರಗತಿಶೀಲರಿಗಿಂತ ಭಿನ್ನವಾಗಿ ರಚಿತಗೊಂಡವು. ರಾಮಚಂದ್ರಶರ್ಮರ 'ಸೆರಗಿನ ಕೆಂಡ', ಶಾಂತಿನಾಥ ದೇಸಾಯಿ ಅವರ 'ಕ್ಷಿತಿಜ' ಸದಾಶಿವ ಅವರ 'ನಲ್ಲಿಯಲ್ಲಿ ನೀರು ಬಂತು', ಅನಂತಮೂರ್ತಿ ಅವರ 'ಕ್ಲಿಪ್ ಜಾಯಿಂಟ್', 'ತಾಯಿ', 'ಆಕಾಶ ಮತ್ತು ಬೆಕ್ಕು', 'ಕಾರ್ತಿಕ', ಲಂಕೇಶ್ ಅವರ 'ರೊಟ್ಟಿ' 'ಉಮಾಪತಿಯ ಸ್ಕಾಲರ್ ಶಿಪ್ ಯಾತ್ರೆ', ಯಶವಂತ ಚಿತ್ತಾಲರ 'ಕತೆಯಾದಳು ಹುಡುಗಿ', ಟಿ.ಜಿ. ರಾಘವ ಅವರ 'ಶ್ರಾದ್ಧ' ಕತೆಗಳು

ನವ್ಯದ ಉತ್ತಮ ಬರಹಗಳಾಗಿವೆ. "ನವ್ಯದ ಕಾಲದಲ್ಲೇ ಬರೆಯುತ್ತಿದ್ದ ಶ್ರೀಕೃಷ್ಣ ಆಲನಹಳ್ಳಿ ಅವರ ಕತೆಗಳು ನವ್ಯದ ಛಾಯೆಯನ್ನು ಹೊಂದಿದ್ದು ಕೂಡ ಮಣ್ಣಿನ ವಾಸನೆ ಇರುವ ಕತೆಗಳು. ಈ ಸಂದರ್ಭದಲ್ಲಿ ನವ್ಯದಿಂದ ಬಿಡಿಸಿಕೊಂಡು ಹೊಸ ಮಾರ್ಗಗಳನ್ನು ಕಂಡುಕೊಳ್ಳಲು ಯುವಕತೆಗಾರರು ಹಾತೊರೆಯುತ್ತಿದ್ದುದನ್ನು ಆಗಿನ ಕೆಲವು ಕತೆಗಳಲ್ಲೇ ಕಾಣಬಹುದು. ಪೂರ್ಣಚಂದ್ರ ತೇಜಸ್ವಿಯವರ ಮೊದಲ ಕತೆಗಳು ನವ್ಯದ ಹಿಡಿತದಿಂದ ಬಿಡಿಸಿಕೊಳ್ಳಲು ಮಾಡುವ ಪ್ರಯತ್ನದಂತಿರುವುದು ಇದಕ್ಕೆ ಸಾಕ್ಷಿಯಾಗಿದೆ".[7] ನವ್ಯ ಸಾಹಿತ್ಯ ಜನವಿಮುಖವಾಗುತ್ತಿತ್ತು ಎಂಬ ಅಂಶವನ್ನು ದೇವಯ್ಯ ಹರವೆಯವರು ಹೀಗೆ ಗುರುತಿಸಿದ್ದಾರೆ.

"ನವ್ಯ ಸಾಹಿತ್ಯದ ಸಂದರ್ಭದಲ್ಲಿ ಬಂದ ಬಹಳಷ್ಟು ಕೃತಿಗಳಲ್ಲಿ ಕಾಮದ ಘಾಟು ಮೂಗಿಗೆ ಬಡಿಯುತ್ತಿತ್ತು. ಕಾಮ ಮನುಷ್ಯನ ಮೂಲಭೂತ ಆಸಕ್ತಿಗಳಲ್ಲಿ ಒಂದು ನಿಜ. ಅದನ್ನೊಪ್ಪಿಕೊಂಡ ನಮ್ಮ ಜನ ತಾವು ದಿನನಿತ್ಯ ಉಣ್ಣುವಂತೆ, ಕುಡಿಯುವಂತೆ ಕಾಮಾಸಕ್ತಿಯನ್ನು ಸಹಜವಾಗಿ ನೋಡಿರುವರೆ ವಿನಾ ಅತ್ಯಂತ ವಿಶಿಷ್ಟ ಮಟ್ಟದಲ್ಲಲ್ಲ. ಯಾಕೆಂದರೆ ಈ ದೇಶದ ಮನುಷ್ಯನಿಗೆ ಬೇರೆ ಬಹಳ ವಿಷಯಗಳಿವೆ. ಒಂದಲ್ಲ ನೂರುಥರ ಸಮಸ್ಯೆಗಳಿವೆ. ಹಾಗಿರುವಾಗ ಹಗಲು ಸಂಜೆ ಕಾಮದ ಬಗ್ಗೆ ಯೋಚಿಸುವಂಥಾದ್ದು ಈ ನೆಲಕ್ಕೆ ಒಗ್ಗದ ಮಾತು. ತಿನ್ನುವುದಕ್ಕೆ, ಕುಡಿಯುವುದಕ್ಕೆ ಬಹಳಷ್ಟು ಇರುವ ಯೋಚಿಸುವುದಕ್ಕೆ ಬೇರೇನೂ ಇಲ್ಲದೆ ಕಡಿಮೆ ಮಂದಿ ಮಾತ್ರ ಕಾಮಾಸಕ್ತಿ ಒಂದು ಸಹಜ ಸಂಗತಿ ಎಂದು ತಿಳಿಯುವುದಕ್ಕಿಂತ, ಅದೊಂದು ಗಹನವಾದ ವಿಚಾರವೆಂದು ತಿಳಿಯುತ್ತಾರೆ. ಆಗ ಹಗಲು ಸಂಜೆ ಅದನ್ನೆ ಕುರಿತು ಯೋಚಿಸುತ್ತಾರೆ. ಸಹಜ ಪ್ರವೃತ್ತಿಯೊಂದು ಇಂಥವರಲ್ಲಿ ತೀಟೆಯಾಗಿ ಮಾರ್ಪಾಡಾಗಿರುತ್ತದೆ. ಇಂಥ ಹಿಡಿಯಷ್ಟು ಮಂದಿಯು ಭಾವಿಸಿಕೊಳ್ಳುವ ತೀಟೆಯ ಸಂಗತಿ ನವ್ಯ ಸಾಹಿತ್ಯದ ಸಂದರ್ಭದಲ್ಲಿನ ಮುಖ್ಯ ಕೃತಿಯಲ್ಲಿ ಕಾಣಿಸಿಕೊಂಡಿತು. ಸಹಜವಾಗಿ ಇಂಥ ಕೃತಿಗಳು ಜನಸಮುದಾಯವನ್ನು ಪ್ರತಿನಿಧಿಸದೆ ಹಿಡಿಯಷ್ಟು ಮಂದಿಯನ್ನು ಮಾತ್ರ ಪ್ರತಿನಿಧಿಸುವಂತಾದವು".[8] ಅಲ್ಲದೆ ನವ್ಯ ಸಾಹಿತ್ಯದ ತಂತ್ರ,

ಸಾಂಕೇತಿಕತೆ, ಶೈಲಿಗಳು ಓದುಗರನ್ನು ತಲುಪಲು ವಿಫಲವಾದವು. ಹೀಗೆ ನವ್ಯ ಸಾಹಿತ್ಯ ಜನದೂರವಾದಾಗ ಸಮಷ್ಟಿಯನ್ನು ಒಳಗೊಳ್ಳವುದು ಸಾಧ್ಯವಾಗದೇ ಹೋದಾಗ ಹೊಸ ತಲೆಮಾರಿನ ಲೇಖಕರು ವಿವಿಧ ಆಲೋಚನೆಗಳಿಂದ ಬರೆಯಲು ಪ್ರಾರಂಭಿಸಿದರು. ಅದು ಬಂಡಾಯ ಸಾಹಿತ್ಯದ ಉಗಮವೆಂದು ಪರಿಭಾವಿಸಬಹುದು.

"ಆಧುನಿಕ ಕನ್ನಡ ಸಾಹಿತ್ಯದ ಮುಖ್ಯ ಚಳುವಳಿಯಾಗಿ ಸಾಹಿತ್ಯವಾಗಿ ತನ್ನ ಛಾಪನ್ನು ಮೂಡಿಸಿದ ಬಂಡಾಯ-ದಲಿತ ಸಾಹಿತ್ಯದ ಮುಖ್ಯ ಪ್ರಕಾರವಾದ ಸಣ್ಣಕತೆಗಳು ವಸ್ತು, ಭಾಷೆ, ಶೈಲಿಯ ದೃಷ್ಟಿಯಿಂದ ವೈವಿಧ್ಯಮಯವಾಗಿವೆ. ಮನುಷ್ಯನ ಆತ್ಮ ನಿರೀಕ್ಷಣೆ, ಅಂತರ್ಮುಖತೆಗೆ ಹೆಸರಾಗಿದ್ದ ನವ್ಯ ಕತೆಗಳಿಂದ ಭಿನ್ನವಾಗಿ ಬಂಡಾಯ-ದಲಿತ ಕತೆಗಳು ಸಮಾಜಮುಖಿಯಾಗಿ ಪ್ರಕಟವಾದವು. ಹಳ್ಳಿಗಾಡಿನ ಕನ್ನಡದ ಒಡಕು ಭಾಷೆಯನ್ನು ಬಳಸುವ ಮೂಲಕ ಭಾಷೆಗೆ ಇದ್ದ ಮೈಲಿಗೆಯನ್ನು ಹೊಡೆದೋಡಿಸಲಾಯಿತು. ಕನ್ನಡದ ಎಲ್ಲ ಪ್ರದೇಶದ ವಿಶಿಷ್ಟ ಕನ್ನಡಭಾಷೆ ಈ ಸಣ್ಣಕತೆಗಳಲ್ಲಿ ಬಳಕೆಯಾಗಿದೆ. ಬಹುಸಂಖ್ಯಾತ ಜನವರ್ಗ ಮಾತನಾಡುವ ಭಾಷೆ ಸಾಹಿತ್ಯದಿಂದ ದೂರವಾಗಿದ್ದ ಕೊರಗನ್ನು ಕಳೆದದ್ದು ಸಣಕತೆಗಳ ವೈಶಿಷ್ಟ್ಯವಾಗಿದೆ. ಕಥನಕಲೆ ಸಮುದಾಯದ ಅನುಭವದಿಂದ ಬಂದಿದ್ದಾದ್ದರಿಂದ ಪ್ರತಿಮೆ, ಪ್ರತೀಕಗಳು, ರೂಪಕ, ಉಪಮೆಗಳು, ಸಾಮಾನ್ಯ ಜನರ ನುಡಿಗಟ್ಟುಗಳಿಂದ ರೂಪುಗೊಂಡಿದೆ".[9]

"ದಲಿತ-ಬಂಡಾಯ ಕತೆಗಳ ವಿಶಿಷ್ಟ ಸಂವೇದನೆ ಹುಟ್ಟಿಕೊಂಡದ್ದು ಆಂತರಿಕ ಒತ್ತಡ ಮತ್ತು ಸಾಮೂಹಿಕ ಅನಿವಾರ್ಯತೆಗಳಿಂದ ಎಂಬುದನ್ನು ಗಮನಿಸಬೇಕು. ಬಂಡಾಯ ಕತೆಗಳ ಸೃಷ್ಟಿ ಸಮುದಾಯದ ಚಳುವಳಿಗಳಿಂದ ಪ್ರೇರಿತವಾಗಿದೆ. ಜನಸಮುದಾಯದ ಎಚ್ಚರ, ಹೊಸ ಆಲೋಚನೆ, ಬದಲಾವಣೆಯ ತುರ್ತುಗಳು, ಸಂವೇದನಾಶೀಲತೆಯಲ್ಲಿವೆ. ಹಳ್ಳಿಗಾಡಿನ ಮೂಲೆಗಳಲ್ಲಿ ವ್ಯಕ್ತಿತ್ವವೇ ಇಲ್ಲದಂತೆ ಬದುಕುತ್ತಿದ್ದ ಕ್ಷುದ್ರ ಜೀವಿಗಳು ತಮ್ಮದೇ ಆದ ಆಸ್ತಿತ್ವಕ್ಕಾಗಿ ಹೋರಾಟ ನಡೆಸಿದ

ಘಟನೆ ಮತ್ತು ಜೀವನ ವೃತ್ತಾಂತಗಳು ಬಂಡಾಯ ಕತೆಗಳಾಗಿವೆ. ವ್ಯವಸ್ಥೆಯೇ ಕ್ರೌರ್ಯದ ಸಾಧನವಾದಾಗ ಮನುಷ್ಯ ಅಸಹಾಯಕನಾಗುತ್ತಾನೆ. ಪ್ರಭುತ್ವವೇ ಮನುಷ್ಯನ ಒಳ್ಳೆತನಗಳ ಮೇಲೆ ಹಲ್ಲೆ ಮಾಡಲು ಪ್ರಯತ್ನಿಸಿದಾಗ, ಪ್ರಭುತ್ವದಿಂದ ರಕ್ಷಣೆ ದೊರೆಯದೆ ಹೋದಾಗ ಮನುಷ್ಯ ಜೀವಿಗಳು ಅನಾಥರಾಗುತ್ತಾರೆ, ದಿಕ್ಕು ತೋಚದೆ ತೊಳಲಾಡುತ್ತಾರೆ. ಇಂತಹ ಸಂದಿಗ್ಧವನ್ನು ಸೆರೆಯಿಡಿಯುವಲ್ಲಿ ಸಣ್ಣಕತೆಗಳು ಯಶಸ್ವಿಯಾಗಿ ಪ್ರಯೋಗವಾಗಿವೆ. ಬಂಡವಾಳಶಾಹಿ ಸಮಾಜದ ಬೆಳವಣಿಗೆ ಯಾಗುತ್ತಿದ್ದಂತೆಯೇ ಅನೇಕ ಬುಡಕಟ್ಟು ಜನಾಂಗಗಳು, ಸಾಂಸ್ಕೃತಿಕ ಮಹತ್ವದ ಅಂಶಗಳು ವಿನಾಶದ ಅಂಚಿಗೆ ತಲುಪುತ್ತವೆ. ಅನೇಕ ಬಾರಿ ನಿರ್ನಾಮವಾಗುತ್ತವೆ. ಸಣ್ಣಕತೆಗಳು ಇಂತಹ ಸಾಂಸ್ಕೃತಿಕ ದಾಖಲೆಗಳಾಗಿವೆ. ಧರ್ಮ ಮತ್ತು ನೈತಿಕತೆ ಎಪ್ಪತ್ತರ ದಶಕದಿಂದೀಚೆಗೆ ಅನೇಕ ರೀತಿಯ ಬದಲಾವಣೆಗೆ ಒಳಗಾಗಿವೆ. ಮೇಲಿನ ಎಲ್ಲ ಕಾರಣಗಳಿಂದ ಬಂಡಾಯ ಕತೆಗಳ ಸಂವೇದನಾ ಶೀಲತೆ ಉತ್ತಮ ಮಟ್ಟದ್ದಾಗಿದೆ. ಈ ಗುಂಪಿನವರು ತಮ್ಮ ಸುತ್ತಲಿನ ಕ್ರೂರ ವಾಸ್ತವಗಳಾದ ಪೋಲೀಸರ ಮತ್ತು ಸೈನ್ಯದ ಗುಂಡಿನ ಸುರಿಮಳೆ, ಸಾಮೂಹಿಕ ನರಹತ್ಯೆ, ದಲಿತರ ಕಗ್ಗೊಲೆ, ವಿವಿಧ ಶೋಷಣೆಗಳ ರುದ್ರ ಕುಣಿತ, ಪ್ರಜಾಪ್ರಭುತ್ವದ ವಿನಾಶ. ಈ ಎಲ್ಲ ಕ್ರೌರ್ಯದ ವಿರುದ್ಧ ಹೋರಾಟ ನಡೆಸುವ ಛಲ ಹೊತ್ತವರು. ಪ್ರಜಾಪ್ರಭುತ್ವದ ರಕ್ಷಣೆಗೆ, ವಿಸ್ತರಣೆಗೆ ದುಡಿಯುತ್ತಿರುವ ಜನ. ಕ್ರಾಂತಿಕಾರಿ ರಾಜಕೀಯ ಪ್ರಜ್ಞೆಯನ್ನು ಹೊಂದಿ ಜನತೆಯ ಹೋರಾಟದ ಬದುಕಿನೊಂದಿಗೆ ಬೆರೆಯಲು ಯತ್ನಿಸುತ್ತಿರುವ ಸಾಹಿತಿಗಳು ಹೊಸ ಸಂಸ್ಕೃತಿಯನ್ನು ಸೃಷ್ಟಿಸುವ ಆಸೆ ಹೊತ್ತಿದ್ದಾನ".[10] ಹೀಗೆ ಕನ್ನಡದ ವಿವಿಧ ಕಾಲಘಟ್ಟಗಳಲ್ಲಿ ಬೆಳೆದುಬಂದ ಸಣ್ಣಕತೆ ಪ್ರಕಾರ ಆಯಾಕಾಲದ ಜನಜೀವನವನ್ನು ಸಮರ್ಥವಾಗಿ ಸೆರೆಹಿಡಿಯುವಲ್ಲಿ ಯಶಸ್ವಿಯಾಗಿದೆ.

**ಅಡಿಟಿಪ್ಪಣಿಗಳು**

1. ಕೆ.ಡಿ. ಕುರ್ತಕೋಟಿ : ಯುಗಧರ್ಮ ಹಾಗೂ ಸಾಹಿತ್ಯದರ್ಶನ: ಪುಟ:120
2. ಅದೇ : ಪುಟ : 120
3. ಅದೇ : ಪುಟ : 143
4. ರಂ.ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ; ಪುಟ : 262
5. ಕೆ.ಡಿ. ಕುರ್ತಕೋಟಿ : ಯುಗಧರ್ಮ ಹಾಗೂ ಸಾಹಿತ್ಯದರ್ಶನ: ಪುಟ:562
6. ಅದೇ : ಪುಟ : 163
7. ಡಾ. ಎಲ್. ಹನುಮಂತಯ್ಯ ; ಕಥಾಕಥನ ; ಪುಟ : 8
8. ಅದೇ ; ಪುಟ : 9
9. ಅದೇ : ಪುಟ : 163
10. ಅದೇ : ಪುಟ : 164

## 2. ಉದ್ದೇಶ ಮತ್ತು ವ್ಯಾಪ್ತಿ

ನವ್ಯ ಚಳುವಳಿ ಉತ್ತುಂಗ ಸ್ಥಿತಿಯಲ್ಲಿದ್ದಾಗಲೇ ಬರೆಯುತ್ತಿದ್ದ 'ಬೆಸಗರಹಳ್ಳಿ ರಾಮಣ್ಣ'ನವರು ಮಾನವೀಯ ಕಳಕಳಿಯುಳ್ಳ ಶ್ರೇಷ್ಠ ದರ್ಜೆಯ ಲೇಖಕರಾಗಿದ್ದಾರೆ. ತೇಜಸ್ವಿ ಮತ್ತು ಮಹಾದೇವ ಅವರು ನವ್ಯದ ಪ್ರಭಾವದಿಂದ ಭಾವನಾತ್ಮಕವಾಗಿ ಬಿಡಿಸಿಕೊಂಡರೂ ಬರವಣಿಗೆಯಲ್ಲಿ ಪ್ರಭಾವಗಳು ಉಳಿಯುವಷ್ಟು ದೃಗ್ಗೋಚರವಾಗಿ ಬರೆಯುತ್ತಿದ್ದ ಕಾಲದಲ್ಲಿ ರಾಮಣ್ಣನವರು ಸಂಪೂರ್ಣವಾಗಿ ಭಿನ್ನವಾಗಿ ಬರೆಯುತ್ತಿದ್ದ ವಿಶಿಷ್ಟ ಕತೆಗಾರರಾಗಿದ್ದಾರೆ. ಯಾವುದೇ ತತ್ವ ಸಿದ್ಧಾಂತಗಳ ಗೋಜಿಗೆ ಸಿಲುಕಿಕೊಳ್ಳದೆ ವಸ್ತು, ಭಾಷೆ, ಶೈಲಿ, ತಂತ್ರದ ದೃಷ್ಟಿಯಿಂದ ತಮ್ಮದೆಯಾದ ಜಾಡೊಂದನ್ನು ಸೃಷ್ಟಿಸಿಕೊಂಡು ಬರೆದವರಾಗಿದ್ದಾರೆ. ಗ್ರಾಮೀಣ ಪರಿಸರದಲ್ಲಿ ತೆರೆದ ಮನಸ್ಸಿನಿಂದ ಅವರು ಪಡೆದ ಅನುಭವಗಳು ಕತೆಗಳಾಗಿ ರೂಪುಗೊಂಡಿವೆ. ಹಳ್ಳಿಯ ಬದುಕನ್ನು ಸೆರೆಹಿಡಿಯಲು ಪ್ರಯತ್ನಿಸುತ್ತಿದ್ದ ಬರಗೂರು, ನಾಗವಾರ, ಕುಂ. ವೀರಭದ್ರಪ್ಪ ಮುಂತಾದವರಿಗಿಂತ ವಿಶಿಷ್ಟವಾದ ರೀತಿಯಲ್ಲಿ ತಮ್ಮ ಕತೆಗಳನ್ನು ನೇಯ್ದಿದ್ದಾರೆ. ಆ ಮೂಲಕ ಗ್ರಾಮೀಣ ಭಾರತದ ಬಹುಮುಖೀ ಸಂಸ್ಕೃತಿಯ ಸಮೃದ್ಧ ಅನುಭವಗಳನ್ನು ಓದುಗರಿಗೆ ಉಣ ಬಡಿಸುತ್ತಾರೆ. ಅಲ್ಲದೆ ಕನ್ನಡ ಸಾಹಿತ್ಯ ಈವರೆಗೆ ಕಾಣದಿದ್ದ ಶೂದ್ರ ಜನಾಂಗದ ಕೋಟಲೆಗಳನ್ನು ಅಕ್ಷರವನ್ನಾಗಿಸಿದ ಲೇಖಕರು ಇವರಾಗಿದ್ದಾರೆ. ಅದರಲ್ಲೂ ಬಂಡಾಯ ಸಾಹಿತ್ಯದ ಆರಂಭಕ್ಕೂ ಮೊದಲೇ ಬಂಡಾಯದ ಆಶಯಗಳನ್ನು ಹೊತ್ತ ಇವರ ಕತೆಗಳು ರಚಿತವಾಗಿದ್ದವು ಎಂಬುದನ್ನು ನೆನೆದರೆ ರಾಮಣ್ಣನವರ ವಿಶೇಷತೆ ಸ್ಪಷ್ಟವಾಗುತ್ತದೆ. ಹೀಗೆ ಗ್ರಾಮೀಣ ಬದುಕಿನ ವೈಶಿಷ್ಟತೆ, ವಿಭಿನ್ನತೆಗಳು ರಾಮಣ್ಣನವರ ಬರವಣಿಗೆಯಲ್ಲಿ ಕಾಣಿಸಿಕೊಂಡಿರುವ ಹಿನ್ನೆಲೆಯಲ್ಲಿ ಇವರ ಕತೆಗಳ ಅಧ್ಯಯನ ಕುತೂಹಲಕಾರಿಯಾಗಿದೆ.

ಹಳ್ಳಿಯ ಬದುಕು ವೈವಿಧ್ಯತೆ, ವೈಶಿಷ್ಯಗಳ ಆಗರವಾಗಿದೆ. ಅಲ್ಲಿ ಪ್ರೀತಿ-ದ್ವೇಷ, ಸುಖ-ದುಃಖ, ತ್ಯಾಗ-ಸ್ವಾರ್ಥ, ಕರುಣೆ-ಕೌರ್ಯ ಹೀಗೆ ಹಲವು ಮಾನವೀಯ ಗುಣದೋಷಗಳು ಅರಳಿ ತಮ್ಮ ಸಹಜತೆಯ ಚೆಲುವಿನಲ್ಲಿ

ಗಮುಗುಡುತ್ತವೆ. ಜನಪದ ಸಾಹಿತ್ಯ, ಸಂಸ್ಕೃತಿ, ಸಂಪ್ರದಾಯಗಳು ಗ್ರಾಮ್ಯ ಬದುಕಿನ ಒಡನಾಡಿಗಳೆನಿಸಿವೆ. ಜನಪದರಿಗೆ ದೇವರು, ದೆವ್ವ, ಜೋತಿಷ್ಯ ವಿಷಯಗಳಲ್ಲಿ ಅಸೀಮವಾದ ವಿಶ್ವಾಸವಿರುವಂತೆಯೇ ಕಾಮ, ಪ್ರೀತಿ, ಹಾದರದಂತಹ ವಿಚಾರಗಳಲ್ಲಿ ಸಹಜವಾಗಿ ವರ್ತಿಸುತ್ತಾರೆ. ಅಚಲವಾದ ಜೀವನ ಶ್ರದ್ಧೆ ಮತ್ತು ಕಷ್ಟಸಹಿಷ್ಣುತೆ ಅವರ ಬದುಕಿಗೆ ಅಂಟಿಕೊಂಡೇ ಸಾಗುತ್ತದೆ. ಹಳ್ಳಿಗಳಲ್ಲಿ ಜಾತಿವ್ಯವಸ್ಥೆ ಕಟ್ಟುನಿಟ್ಟಾಗಿ ಆಚರಿಸಲ್ಪಡುತ್ತದೆಯಾದರೂ ಅಸಮಾನತೆಯ ಅಂತರ ಕಡಿಮೆಯಿದೆ. ಶ್ರೀಮಂತರಾಗಲಿ, ಬಡವರಾಗಲಿ ಅವರು ತಿನ್ನುವ ಆಹಾರ ತೊಡುವ ಬಟ್ಟೆ ಸಾಮಾನ್ಯವಾಗಿ ಹೋಲುತ್ತದೆ. ಇಂಥ ಗ್ರಾಮಜೀವನದ ಸಕಲ ಸೂಕ್ಷ್ಮಗಳೆಲ್ಲವೂ ಅವುಗಳ ಮೂಲ ಸೊಗಡಿನಲ್ಲಿಯೇ ರಾಮಣ್ಣನವರ ಕತೆಗಳಲ್ಲಿ ಮಡುಗಟ್ಟಿ ನಿಂತಿದೆ. ಇತ್ತೀಚಿನ ದಿನಗಳಲ್ಲಿ ನಮ್ಮ ದೈನಂದಿನ ಬದುಕಿನೊಳಗೆ ಇರುವ ಸುವಾಸನೆಗೆ ಬೆನ್ನುಕೊಟ್ಟು ಯಾಂತ್ರಿಕ ಜಗತ್ತು ಸೃಷ್ಟಿಸುತ್ತಿರುವ ನಕಲಿ ವಾಸನೆಗೆ ಮಾರುಹೋಗಿ ಸ್ಥಳೀಯ ಜೀವನಸೆಲೆಗಳನ್ನು ತಿರಸ್ಕರಿಸುತ್ತಿರುವುದು ದುರದೃಷ್ಟಕರ. ಹೀಗೆ ಅಲಕ್ಷ್ಯಕ್ಕೊಳಗಾದ ವಸ್ತುವನ್ನು ಅದೊಂದು ಬದುಕಿನ ಅನನ್ಯ ಘಟಕವೆಂದು ಪ್ರಾಣಧಾರಣೆ ಮಾಡುವುದು ಬಹುಶಃ ಪ್ರಥಮ ದರ್ಜೆ ಲೇಖಕರಿಂದ ಮಾತ್ರ ಸಾಧ್ಯ. ಅಂಥ ಲೇಖಕನಿಗೆ ಈ ದೇಶದ ಗ್ರಾಮೀಣ ಬದುಕು ಬಗೆಗಿನ ಅಂತರಾಳದ ಅರಿವು ಇರಬೇಕಾದುದು ಅನಿವಾರ್ಯ. ಇಂದಿನ ಆಧುನಿಕ ಜಗತ್ತಿನ ಯೋಜನೆಗಳು ಹಳ್ಳಿಗಳನ್ನು ತಿರಸ್ಕರಿಸಿ ಸ್ವಕೇಂದ್ರಿಕರಣಗೊಳ್ಳುತ್ತಿರುವ ಸಂದರ್ಭದಲ್ಲಿ ಅದನ್ನು ವಿರೋಧಿಸಿ ಬದಲಿ ಘಟಕವೊಂದನ್ನು ಸೃಷ್ಟಿಸುವ ರಾಮಣ್ಣನವರು ನಿಜಕ್ಕೂ ನಮ್ಮ ನಡುವಿನ ದೊಡ್ಡ ಲೇಖಕ.

ಇಂದಿನ ವೈಜ್ಞಾನಿಕ ಯುಗದಲ್ಲಿ ಜೀವನೋತ್ಸಾಹದ ಸೆಲೆ ಬತ್ತುತ್ತಿದೆ. ನಾವು ಬದುಕುತ್ತಿರುವ ರೀತಿಗೂ ಹೊರಗಿನ ಪ್ರಪಂಚ ಓಡುತ್ತಿರುವ ರೀತಿಗೂ ಸಂಬಂಧವೇರ್ಪಡುತ್ತಿಲ್ಲ. ಹಿರಿಯ ತಲೆಮಾರಿಗೂ ಯುವಪೀಳಿಗೆಗೂ ಒಂದೇ ನೆಲದಲ್ಲಿ ಸಂಘರ್ಷವೇರ್ಪಡುತ್ತಿದೆ. ಹೀಗಾಗಿಯೇ ಅವಿಭಕ್ತ ಕುಟುಂಬಗಳು ಛಿದ್ರಗೊಳ್ಳುತ್ತಿವೆ. ಆ ಮೂಲಕ ಬದುಕು ದಿನದಿಂದ ದಿನಕ್ಕೆ

ಯಾಂತ್ರೀಕರಣಗೊಳ್ಳುತ್ತಿದೆ. ನಾವು ಪಡೆಯುತ್ತಿರುವ ಓದು, ವೈಚಾರಿಕ ಜ್ಞಾನ ನಮ್ಮನ್ನು ಬದುಕಿನಿಂದ ದೂರ ಸರಿಯುವಂತೆ ಮಾಡುತ್ತಿದೆ. ನಮ್ಮ ಸುತ್ತಲಿನ ಆವರಣ ಮಾನವೀಯಗೊಳ್ಳಬೇಕು ಎಂದು ಶತಮಾನಗಳಿಂದಲೂ ಹೋರಾಟ ನಡೆಯುತ್ತಿದೆ. ಆದರೆ ವಾಸ್ತವದಲ್ಲಿ ಅದು ದಿನೇ ದಿನೇ ಹದಗೆಡುತ್ತಿದೆ. ಇಂಥ ಅತಂತ್ರ ಬದುಕು ಹಸನಾಗಬೇಕಾದರೆ ಜಾತೀಯತೆ, ಭ್ರಷ್ಟತೆ, ಗೋಮುಖವ್ಯಾಘ್ರ ರಾಜಕಾರಣದಂತಹ ದುಷ್ಟಶಕ್ತಿಗಳು ತೊಲಗಿ ಅಲ್ಲಿ ತ್ಯಾಗ, ಸಮಾನತೆ, ಸ್ವಾತಂತ್ರ್ಯ, ಪ್ರೀತಿ, ಸಹಕಾರ, ಮೊದಲಾದ ಮಾನವೀಯ ಮೌಲ್ಯಗಳು ನೆಲೆ ನಿಲ್ಲಬೇಕು ಎಂಬುದೇ ರಾಮಣ್ಣನವರ ಪ್ರಮುಖ ಕಳಕಳಿಯಾಗಿದೆ.

ರಾಮಣ್ಣನವರು ಮೂಲತಃ ಒಬ್ಬ ಮಾನವತಾವಾದಿ. ಗ್ರಾಮೀಣ ಜನರ ಕೆಲವು ಸಣ್ಣತನಗಳನ್ನು ಕುಟುಕುತ್ತಲೇ ಆ ಜನರ ಹೃದಯವೈಶಾಲ್ಯತೆ, ಸರಳತೆಗಳ ಬಗ್ಗೆ ಅಭಿಮಾನ ಮತ್ತು ಪ್ರೀತಿಯಿಂದ ಬರೆಯುತ್ತಾರೆ. ಇವರ ವೈದ್ಯಕೀಯ ಸೇವೆ ಸಂಪೂರ್ಣವಾಗಿ ಗ್ರಾಮೀಣ ಪ್ರದೇಶಗಳಲ್ಲಿಯೇ ನಡೆದಿರುವುದು. ಗ್ರಾಮೀಣ ಜನರ ಬಗ್ಗೆ ಅವರಿಗಿದ್ದ ಪ್ರೀತಿಗೆ ಸಾಕ್ಷಿ. ಅದರಲ್ಲೂ ರಾಮಣ್ಣನವರು ಹುಟ್ಟಿದ ಮಂಡ್ಯ ಜಿಲ್ಲೆ ಶ್ರಮಜೀವಿ ರೈತನ ನೆಲ. ಜನಪದ ಸಾಹಿತ್ಯ ಈ ಜಿಲ್ಲೆಯ ಉಸಿರು. ಹೀಗಾಗಿ ರಾಮಣ್ಣನವರ ಕತೆಗಳಲ್ಲಿ ಮೂಡಿಬಂದಿರುವ ಗ್ರಾಮೀಣ ಸೊಗಡಿಗೆ ವಿಶೇಷವಾದ ಕಳೆಯಿದೆ. ಹೀಗಾಗಿ ಅವರ ಕತೆಗಳಲ್ಲಿ ಅಡಗಿರುವ ಗ್ರಾಮ್ಯ ಬದುಕಿನ ವಿವಿಧ ಮಜಲುಗಳನ್ನು ಕಂಡುಕೊಳ್ಳುವ ಉದ್ದೇಶದಿಂದ 'ಬೆಸಗರಹಳ್ಳಿ ರಾಮಣ್ಣನವರ ಕತೆಗಳಲ್ಲಿ ಗ್ರಾಮಜೀವನದ ಸೂಕ್ಷ್ಮಗಳು' ಎಂಬ ಶೀರ್ಷಿಕೆಯಡಿಯಲ್ಲಿ ಸಂಪ್ರಬಂಧವನ್ನು ರಚಿಸುತ್ತಿದ್ದೇನೆ.

ರಾಮಣ್ಣವನರು 'ನೆಲದ ಒಡಲು', 'ಗರ್ಜನೆ', 'ಹರಕೆಯ ಹಣ', 'ಒಂದು ಹುಡುಗನಿಗೆ ಬಿದ್ದ ಕನಸು', ಈ ಮೊದಲಾದ ಕಥಾ ಸಂಕಲಗಳನ್ನು ಹೊರತಂದಿದ್ದಾರೆ. ಇವೆಲ್ಲವೂ ಒಟ್ಟಾಗಿ 'ಕನ್ನಂಬಾಡಿ' ಎಂಬ ಹೆಸರಿನಲ್ಲಿ

ಸಂಗ್ರಹಗೊಂಡಿವೆ. ಇನ್ನುಳಿದಂತೆ 'ರಕ್ತ ಕಣ್ಣೀರು', 'ತೋಳಗಳ ನಡುವೆ', ಎಂಬ ಕಾದಂಬರಿಗಳಲ್ಲದೆ ಹಲವಾರು ಬಿಡಿ ಲೇಖನಗಳನ್ನು ಬರೆದಿದ್ದಾರೆ. ಹೀಗಾಗಿ ಅವರ ಸಾಹಿತ್ಯದ ಪರಿಧಿ ವಿಸ್ತಾರವಾದುದಾಗಿದೆ. ಸಮಯದ ಮಿತಿಯಿಂದಾಗಿ ಪ್ರಸ್ತುತ ನನ್ನ ಬರವಣಿಗೆ ರಾಮಣ್ಣನವರ ಕತೆಗಳ ಮಟ್ಟಿಗೆ ಸಂಕುಚಿತಗೊಂಡಿದೆ. ಕತೆಗಳಲ್ಲಿಯೂ ಗ್ರಾಮಜೀವನದ ಸೂಕ್ಷ್ಮಗಳು ಎಂಬ ಚೌಕಟ್ಟಿಗೆ ವಿಷಯವನ್ನು ಸಂಕ್ಷಿಪ್ತಗೊಳಿಸಿಕೊಂಡು ವಿವಿಧ ಅಧ್ಯಾಯಗಳಲ್ಲಿ ಈ ಮುಂದೆ ಅಧ್ಯಯನವನ್ನು ನಡೆಸಿದ್ದೇನೆ.

### ೩. ಸಂಘರ್ಷದಿಂದ ಸಾಮರಸ್ಯದೆಡೆಗೆ

ಒಡೆದ ಮನಸ್ಸುಗಳನ್ನು ಮತ್ತೆ ಬೆಸೆಯುವುದು ರಾಮಣ್ಣನವರ ಬಹುಪಾಲು ಕತೆಗಳ ಸಾಮಾನ್ಯ ಲಕ್ಷಣವಾಗಿದೆ. ಕೃಷಿ ಜೀವನ ಅನುಭವಿಸುತ್ತಿರುವ ಸಮಸ್ಯೆಯಿಂದಾಗಿಯೋ, ಕುತಂತ್ರದಿಂದಾಗಿಯೋ, ಒಣ ಪ್ರತಿಷ್ಠೆಯಿಂದಾಗಿಯೋ, ತಾತ್ಕಾಲಿಕವಾಗಿ ಸಂಘರ್ಷ ಏರ್ಪಡುತ್ತದೆ. ಇದು ಅನಿವಾರ್ಯ ಕೂಡ. ಆದರೆ ಸಂಘರ್ಷ ಸ್ಥಾಯಿಯಾಗಬಾರದೆಂಬುದೆ ರಾಮಣ್ಣನವರ ಆಶಯ. 'ಸುಗ್ಗಿ', 'ಮಳೆಗರೆಯಿತು ಬಾನು', 'ಮಹಾನವಮಿ', 'ದೇವರ ಹೂ', 'ಅವ್ವ', 'ತಾಯಿ', 'ನೆಲದ ಉಸಿರು', ಕತೆಗಳು ಈ ಗುಂಪಿಗೆ ಸೇರುತ್ತವೆ. ಈ ಕತೆಗಳಲ್ಲಿ ಒಡೆದ ಮನಸ್ಸು, ಬಿರುಕು ಬಿಟ್ಟಸ್ನೇಹ, ಮುರಿದ ಮನೆ, ಮತ್ತೆ ಒಂದಾಗುವ ಸಹಜ ಚಿತ್ರಣವಿದೆ. ರಾಮಣ್ಣನವರ ಮೇಲೆ ಗಾಂಧಿ ವಿಚಾರಗಳ ಗಾಢ ಪ್ರಭಾವವಿರುವುದನ್ನು ಈ ಸಂದರ್ಭದಲ್ಲಿ ಗುರುತಿಸಬಹುದು. ಹೀಗಾಗಿ ಬಂಡಾಯವೆನ್ನಬಹುದಾದ ಸಂಘರ್ಷದ ಮಾದರಿಗಿಂತ, ಮನಸ್ಸುಗಳನ್ನು ಬೆಸೆಯುವಂತೆ ಮಾಡಿಸುವ ರಾಮಣ್ಣನವರ ಮನುಷ್ಯ ನಂಬಿಕೆ ಇಲ್ಲಿ ಮುಖ್ಯವಾಗುತ್ತದೆ.

ಕೌಟುಂಬಿಕ ವಿಘಟನೆಯ ಘಟಕಗಳು ತಾತ್ಕಾಲಿಕವಾಗಿ ರೂಪುಗೊಂಡು, ಒಂದು ಭಾವನಾತ್ಮಕ ಸಂದರ್ಭದಲ್ಲಿ ಒಂದುಗೂಡುವುದನ್ನು ರಾಮಣ್ಣ ಹಲವಾರು ಕತೆಗಳಲ್ಲಿ ಹೇಳಿದ್ದಾರೆ. ಆ ವಿಘಟನೆಯು ಅನ್ಯ ಪ್ರಭಾವದಲ್ಲಿರಬಹುದು ಅಥವಾ ತನ್ನ ನೆಲೆಯನ್ನು ಭದ್ರಪಡಿಸಿಕೊಳ್ಳಬೇಕೆಂಬ ಆಸಕ್ತಿಯಿಂದ ಆಗಿರಬಹುದು. ಅದನ್ನು ರಾಮಣ್ಣ ಬದುಕಿನ ಅನಿವಾರ್ಯವಾಗಿ ಸ್ವೀಕರಿಸುವುದಿಲ್ಲ. ಆದ್ದರಿಂದ ಅದು ಸ್ಥಾಯಿಯಾಗುವುದನ್ನು ವಿರೋಧಿಸುತ್ತಾರೆ. ಅದಕ್ಕೆ ನಿದರ್ಶನವಾಗಿ 'ಸುಗ್ಗಿ' ಕತೆಯನ್ನು ಗಮನಿಸಬಹುದು. ಪುಟ್ಟಸ್ವಾಮಿ ಮನೆ ಮುರುಕರಾದ ಮರಿದಿಮ್ಮ, ಕೆಂಪಣ್ಣರ ನಯವಾದ ಮಾತುಗಳಿಗೆ ಮರುಳಾಗಿ ಅಣ್ಣನಾದ ಶಿವರಾಮೇಗೌಡನಲ್ಲಿ ಪಾಲು ಕೇಳುವುದೇ ಕಾರಣವಾಗಿ ಹರ್ಷದ ಸುಗ್ಗಿಗೆ ದುಃಖದ ಕರಿನೆರಳು

ಆವರಿಸುವುದು 'ಸುಗ್ಗಿ'ಯ ಕಥಾವಸ್ತುವಾಗಿದೆ. ಒಡೆದ ಮನಸ್ಸು ಒಂದು ಗೂಡಿದ ಬಗೆಯನ್ನು ಭತ್ತದ ರಾಶಿಯೊಂದಿಗೆ ಹೋಲಿಸಿ ಹೇಳುವ ಕೌಶಲ ಅರ್ಥಪೂರ್ಣವಾಗಿದೆ. ವಿರಸದಿಂದ ಉಂಟಾದ ನೀರಸ ವಾತಾವರಣದ ಪರಿಣಾಮಗಳ ಚಿತ್ರಣವನ್ನು ನೀಡುತ್ತಲೇ ಸುಗ್ಗಿಯ ಹಿಗ್ಗನ್ನು ಹಲವು ಕೌಶಲಗಳ ಮೂಲಕ ದರ್ಶಿಸುತ್ತಾರೆ.

ಹಳ್ಳಿಗಳಲ್ಲಿ ಹಾಲುಜೇನಿನಂತಹ ಸಂಸಾರಕ್ಕೆ ಹುಳಿ ಹಿಂಡುವ ಮರಿದಿಮ್ಮ, ಕೆಂಪಣ್ಣನಂತಹವರು ಇರುವಂತೆ ಒಡೆದ ಮನಸ್ಸಿಗೆ ಮರುಕ ಪಡುವಂತಹ ಸಿದ್ದಣ್ಣ, ಮರಿಕಾಳ, ರಾಮಾಜೋಯಿಸರಂತಹ ವ್ಯಕ್ತಿಗಳು ಇರುವುದನ್ನು ರಾಮಣ್ಣನವರು ಗುರುತಿಸಿದ್ದಾರೆ. ಚಾಡಿಮಾತುಗಳು ತಾತ್ಕಾಲಿಕವಾಗಿ ಜಯಶಾಲಿಯಂತೆ ಕಂಡು ಬಂದರೂ ಅಂತ್ಯದಲ್ಲಿ ನಗೆಪಾಟಲಿಗೆ ಗುರಿಯಾಗುವ ಬಗೆಯನ್ನು ಕಥೆಗಾರರು ಹಾಸ್ಯಮಯವಾಗಿ ಚಿತ್ರಿಸಿದ್ದಾರೆ. ಹಾಗೆ ನೋಡಿದರೆ 'ಹಾಸ್ಯ' ಮತ್ತು 'ಅಸೂಯೆ' ಗ್ರಾಮ್ಯ ಬದುಕಿನ ಪ್ರಮುಖ ಮನಸ್ಥಿತಿಗಳೆಂಬುದನ್ನು ಗಮನಿಸಬೇಕು. ಹಾಸ್ಯ ಇಲ್ಲಿಯ ಬದುಕನ್ನು ರಸವತ್ತಾಗಿಸಿದರೆ ಅಸೂಯೆ ಹಳ್ಳಿಗಳ ದೌರ್ಬಲ್ಯವೂ ಆಗಿದೆ. ಒಬ್ಬ ವ್ಯಕ್ತಿ ಉನ್ನತ ಮಟ್ಟಕ್ಕೆ ಬೆಳೆಯುವಾಗಲಾಗಲಿ, ಅಣ್ಣ ತಮ್ಮಂದಿರು ಹೊಂದಾಣಿಕೆಯಿಂದ ಹೋಗುತ್ತಿರುವಾಗಲೇ ಆಗಲಿ ಅದನ್ನು ಕೆಡಿಸುವ ಕೈ ಗಳು ಹಲವಿರುತ್ತವೆ. ಪುಟ್ಟಸ್ವಾಮಿಯ ಮನಸ್ಸನ್ನು ಪರಿವರ್ತಿಸಲು ಮರಿದಿಮ್ಮ, ಕೆಂಪಣ್ಣರವರು ಬಳಸುವ ನಯವಾದ ತಂತ್ರಗಾರಿಕೆಯನ್ನು ರಾಮಣ್ಣವರು ಸಹಜವಾಗಿ ಚಿತ್ರಿಸಿದ್ದಾರೆ. "ಈಗ ನಿಮ್ಮ ಶಿವರಾಮಣ್ಣನವರ ಮಗ ನಾಗರಾಜು ಮೈಸೂರೇಲಿ ಓದ್ತಾ ಅವನಲ್ಲ ನಿಮಗೆ ಬಂದ ಸಿರಿ ಏನೂ ಅಂತ? ಸುಮ್ಮನೆ ಮೂರೊತ್ತು ಎದೆ ಮುರ್ಕಳಿ........ನೀವು ಹೊರ್ಗೆ ಸರೋಜಕ್ಕ ಒಳ್ಗೆ ಉಳಿದೋರು ಕಾಲ್ಮೇಲೆ ಕಾಲಾಕ್ಕೊಂಡು ಮಜಾ ಮಾಡಲಿ.........ಅವರ ಮಕ್ಕಳು ಅವರಿಗೆ ಹೆಚ್ಚು........ನೀವು ಕೆಟ್ಟಾಗ ಯಾರಾದರೂ".[1] ಈ ಮೊದಲೇ ಹೇಳಿದ್ದ ಚಿಕ್ಕಣ್ಣನ ಉದಾಹರಣೆಗೆಯ ಹಿನ್ನಲೆಯಲ್ಲಿ ಮೂಡಿಬಂದ ಈ ಮಾತುಗಳು ಪುಟ್ಟಸ್ವಾಮಿಯ ಬುದ್ಧಿಗೆ ಮಂಕು

ಹಿಡಿಸುತ್ತವೆ. ಇಲ್ಲೆಲ್ಲ ರಾಮಣ್ಣನವರ ಸೂಕ್ಷ್ಮದೃಷ್ಟಿ ಅತ್ಯಂತ ಸಮರ್ಥವಾಗಿ ಕಾರ್ಯನಿರ್ವಹಿಸಿದೆ.

ತುಂಬಿದ ಸಂಸಾರ ಒಡೆದ ಮಡಿಕೆಯಂತಾದಾಗ ಅದರಲ್ಲಿನ ಸುಖ, ಸಂತೋಷದ ಕ್ಷಣಗಳು ಸೋರಿ ಹೋದಂತಾಗಿ ನೆನಪೆ ನೀರವ ಮೌನಗಳಾಗಿ ಕಾಡುವ ಚಿತ್ರಣ ಸಹಜವಾಗಿ ಮೂಡಿಬಂದಿದೆ. "ನಿನ್ನೆ ರಾತ್ರಿಯಿಂದಲೂ ಎದೆಯಲ್ಲಿ ಹೇಳಲಾರದ ದುಗುಡ ಹಜಾರದ ಒಂದು ಮೂಲೆಯಲ್ಲಿ ಕುಳಿತ ಗೋಣಿಚೀಲಗಳ ಕಂತೆ, ಕೊಳಗ ತನ್ನನ್ನು ನೋಡಿ ಅಣಕಿಸಿದಂತಾಗಿ, ಕಿರುಮನೆಯ ಬಾಗಿಲಿನಲ್ಲಿ ನಿಂತು ಮನೆಯ ಹಜಾರವನ್ನು ನೋಡಿದಾಗ ನಿಶ್ಯಬ್ದದ ಕಾರುಬಾರು ಮನೆಯನ್ನಾವರಿಸಿದ್ದುದು ಪುಟ್ಟಸ್ವಾಮಿಗೆ ಚನ್ನಾಗಿ ಪರಿಚಯವಾಯಿತು. ಅತ್ತಿಗೆಯ ಸುಳಿವಿಲ್ಲ, ನಿನ್ನೆಯಿಂದಲೂ ಮನೆಯ ಹೊಸ್ತಿಲು ಬಳಿ ಅವ್ವ – ತಾಯಕ್ಕ ಕುಳಿತಿರುವುದನ್ನು ಕಂಡು ಅವ್ವನ ತೊಡೆಯ ಮೇಲೆ ಮೊಳಕೈಯೂರಿ, ಗಲ್ಲಕ್ಕೆ ಅಂಗೈ ಕೊಟ್ಟು, ಅಣ್ಣನ ಕಿರಿಯ ಮಗಳು ಯಶೋಧ ಒಮ್ಮೆ ತನ್ನ ಕಡೆಗೆ ಒಮ್ಮೆ ಅವಳ ಅಮ್ಮನ ಕಡೆಗೆ ಆಸೆಗಣ್ಣುಗಳಿಂದ ನೋಡುತ್ತಿದ್ದಳು. ಸದಾ ತನ್ನನ್ನು ಮಾತನಾಡಿಸಿ ನಗುತ್ತಿದ್ದ ತನ್ನ ಅಮ್ಮನಿಗೆ ಏನಾಯಿತು? ಊರ ಮುಂದಿನ ಕಲ್ಲು ಬಸವನಂತೆ ಯಾಕೆ ಕುಳಿತಿದ್ದಾಳೆ?".[2]

"ಈಗ ಎಂಟು ಕಂಬದ ತೊಟ್ಟಿಯ ಮನೆ ಎರಡಾಗುತ್ತದೆ ನಾಲ್ಕಾರು ತಲೆಮಾರುಗಳಿಂದ ಒಡೆಯದ ಮನೆ ಹೋಳಾಗುತ್ತದೆ. ಮಧ್ಯಕ್ಕೊಂದು ಗೋಡೆ. ಹೀಗೆಯೇ ಅಣ್ಣತಮ್ಮಂದಿರ ನಡುವೆ ಒಡಕು. ಈ ಒಡಕು ಹೀಗೆಯೇ ಬಿರುಕು ಬಿಟ್ಟು ದೊಡ್ಡ ಕಂದಕವಾಗುತ್ತದೆ. ಹೀಗೆಯೇ ತಮ್ಮ ಮಕ್ಕಳು ತಮ್ಮಂತೆಯೇ ಪಾಲಾಗಿ ಅವರ ಮಕ್ಕಳು ಅವರನ್ನು ಅನುಸರಿಸಿದರೆ ಮನೆಯ ಆಸ್ತಿಯೆಲ್ಲಾ ಚೂರು ಚೂರು".[3]

ರಾಮಣ್ಣನವರ ಇಂಥ ಚಿತ್ರಣಗಳು ಅವಿಭಕ್ತ ಕುಟುಂಬಗಳನ್ನು ನೆನಪಿಸುವಂತೆಯೇ ಅವುಗಳ ಅವಸಾನದಿಂದಾಗಿ ಉಂಟಾಗಿರುವ ಬದುಕಿನ ದಿವಾಳಿತನವನ್ನು ಬಿಂಬಿಸುತ್ತವೆ. ಆ ಮೂಲಕ ಕುಟುಂಬದ ಒಗ್ಗಟ್ಟನ್ನು ಬೆಂಬಲಿಸುತ್ತಾರೆ. ಲೇಖಕರೆ ಮುನ್ನುಡಿಯಲ್ಲಿ ತಮ್ಮ ಅಣ್ಣನ ಬಗೆಗೆ ಹೇಳುವ ಪ್ರೀತಿ ಪೂರ್ವಕ ಮಾತುಗಳು ಇಲ್ಲಿ ಸ್ಮರಣೆಗೆ ಯೋಗ್ಯವಾಗಿವೆ. 'ಹುಟ್ಟುತ್ತ ಅಣ್ಣತಮ್ಮಂದಿರು ಬೆಳೆಯುತ್ತ ದಾಯಾದಿಗಳು' ಎಂಬ ಗಾದೆಯನ್ನು ಸ್ವಲ್ಪ ಬದಲಿಸಿ ರಾಮಣ್ಣನವರ 'ಸುಗ್ಗಿ' ಕತೆಯ ಆಶಯಕ್ಕೆ ಒಗ್ಗಿಸಿ ಹೇಳುವುದಾದರೆ 'ಹುಟ್ಟುತ್ತ ಅಣ್ಣ ತಮ್ಮಂದಿರು ಬಂದು ಹೋಗುವ ಕಹಿ ಕ್ಷಣಗಳನ್ನು ಮರೆತರೆ ಬೆಳೆಯುತ್ತಲೂ ಅಣ್ಣ ತಮ್ಮಂದಿರೆ'.

ಸುಗ್ಗಿಯ ಹಾಡಿನ ಧಾಟಿಯಲ್ಲಿ ಹೇಳುವುದಾದರೆ,

''ನಮ್ಮೂರ ಕಾಯೋಳೆ ನಮ್ಮವ್ವ
ಎಲ್ಲವ ನಂಮನೆ ಒಂದಾಗಿ ಇರಲವ್ವ ಬೆಳೀಲವ್ವ
ನಂಮನೆ ಕಣಜ ಹಿಗ್ಗಲವ್ವ ಇಂಥ ಸುಗ್ಗಿ ಬರಲವ್ವ'.[4]

ಕಣದ ರಾಶಿ ಹಿಗ್ಗಿದರೂ ಮನಸ್ಸು ಹಿಗ್ಗದಿದ್ದರೆ ಎಲ್ಲವೂ ವ್ಯರ್ಥವಾಗಿ ಕಾಣಿಸುತ್ತದೆ. 'ರಾಶಿಯು, ಮುಂದೆ ಹೋದ ಸಾರಿಗಿಂತಲೂ ದೊಡ್ಡದಾಗಿದ್ದರೂ ಸಹ ಅಣ್ಣ ಒಂದುಕಡೆ....... ನಾನೊಂದುಕಡೆ.....ಈಗ....'.[5] ಮನುಷ್ಯ ಬದುಕಿಗೆ ಹಣಕ್ಕಿಂತಲೂ ಸಂತೋಷ, ಸಹಬಾಳ್ವೆ ಮುಖ್ಯ ಎಂಬುದನ್ನು ಇಂದಿನ ಧನಪಿಶಾಚಿ ಪ್ರಪಂಚಕ್ಕೆ ರಾಮಣ್ಣನವರ 'ಸುಗ್ಗಿ' ಕಥೆ ಹೊಡೆದು ಹೇಳಿದಂತಿದೆ. ಹೀಗಾಗಿ ಹಳ್ಳಿಯ ಬದುಕು ಉತ್ಕೃಷ್ಟವಾಗಿರುವುದು ಆರ್ಥಿಕತೆಗಿಂತಲೂ ಸಾಂಸ್ಕೃತಿಕವಾಗಿ ಎಂಬುದು ರಾಮಣ್ಣನವರ ಕೊನೆಯ ನಿಲುವಾಗಿದೆ.

ಆತ್ಮೀಯ ಸ್ನೇಹಿತರಾದ ಸಣ್ಣ ಮತ್ತು ಪುಟ್ಟರಾಮ ಗದ್ದೆಗೆ ನೀರನ್ನು ಹಾಯಿಸುವ ವಿಷಯವಾಗಿ ಜಗಳವಾಡಿ ಮತ್ತೆ ಒಂದಾಗುವುದು 'ಮಳೆಗರೆಯಿತು ಬಾನು' ಕಥೆಯ ವಸ್ತುವಾಗಿದೆ. ಲೇಖಕರು ಆ ಮೂಲಕ ವ್ಯವಸಾಯ ಬದುಕಿನ ಪ್ರಮುಖ ಸಮಸ್ಯೆಯೊಂದನ್ನು ಎತ್ತಿ ಹಿಡಿದಿದ್ದಾರೆ. ರೈತನ ಕೈ ಕೆಸರಾಗಿ ಬಾಯಿ ಮೊಸರಾಗುವತನಕ ಆತ ಅನುಭವಿಸುವ ಪಾಡುಗಳು ಹೇಳಲಾರದಂತವಾಗಿವೆ. ಕೃಷಿ ಕ್ಷೇತ್ರಕ್ಕೆ ಪ್ರಮುಖವಾಗಿ ಬೇಕಾಗಿರುವಂತಹ ನೀರಿನ ವಿಷಯದಲ್ಲಿ ಆತ ಮಳೆಯೊಡನೆ ಆಡುವ ಜೂಜಾಟ ಮನಕಲಕುವಂತಹದ್ದಾಗಿದೆ. ಬರಗಾಲ, ಪ್ರವಾಹದ ಸುಳಿಗೆ ಸಿಲುಕಿ ತತ್ತರಿಸುತ್ತಾನೆ. ಹೀಗಾಗಿ ನೀರನ್ನು ಹಾಯಿಸುವ ವಿಷಯವಾಗಿ ಅಕ್ಕಪಕ್ಕದ ಗದ್ದೆಯವರು ಜಗಳವಾಡುವಂತಹದ್ದು ಗ್ರಾಮೀಣ ಪರಿಸರದಲ್ಲಿ ಸರ್ವೇ ಸಾಮಾನ್ಯ ವಿಷಯವೆನಿಸಿದೆ.

ಆತ್ಮೀಯ ಸ್ನೇಹಿತರಾಗಿದ್ದ, ಒಬ್ಬರಿಗೊಬ್ಬರು ಆಸರೆಯಾಗಿದ್ದ ಸಣ್ಣ, ಪುಟ್ಟರಾಮ ನೀರನ್ನು ಹಾಯಿಸುವಂತಹ ಒಂದು ಸಣ್ಣ ವಿಷಯವಾಗಿ ಜಗಳವಾಡುವ ಸನ್ನಿವೇಶವನ್ನು ಗಮನಿಸಬೇಕು. ಬಹುದೊಡ್ಡ ದುರಂತದ ಬೀಜಗಳು ಬಹಳ ಸಣ್ಣವಾಗಿರುತ್ತವೆ. ರಾಮಾಯಣದ ಪ್ರಮುಖ ತಿರುವುಗಳನ್ನು ಈ ಸಂದರ್ಭದಲ್ಲಿ ಸ್ಮರಿಸುವುದಾದರೆ ಎಲ್ಲರಿಂದಲೂ ಅಲಕ್ಷಿತಳಾದ ಗೂನು ಬೆನ್ನಿನ ಮುದುಕಿ ರಾಮಾಯಣದ ದಿಕ್ಕನ್ನೆ ಬದಲಿಸಿದರೆ, ಜಿಂಕೆಯನ್ನು ಬಯಸಿದ ಸೀತೆಯ ಸಣ್ಣ ಆಸೆ ಕಥೆಯನ್ನು ದುರಂತದೆಡೆಗೆ ಎಳೆದೊಯ್ಯುತ್ತದೆ. ಹಳ್ಳಿಗಳಲ್ಲಿ ನಡೆಯುವ ಜಗಳಕ್ಕು ವಿಶಿಷ್ಟವಾದ ಸೊಗಡಿದೆ. ಒಬ್ಬರನೊಬ್ಬರು ಬೈಯುವಾಗ ಬಳಸುವ ಭಾಷೆಯನ್ನು ಸ್ವತಃ ಕೇಳಿಯೇ ಸವಿಯಬೇಕು.

'ಮೇಲಿಂದ ನೀರು ತಂದೋರು ಯಾರು?'

'ತಂದ್ರೆ? ಅದ್ಕೆ ಎಲ್ಲ ನಿಮ್ಮಪ್ಪಂದ?'

'ಲೇ ಅಪ್ಪನ ಸುದ್ದಿಗೆ ಬರಬ್ಯಾಡ. ದವಡೆ ಹಲ್ಲು ಕಳ್ಕೋವಂಗೆ ಗುದ್ಲಿ ಅಂಡೇಲಿ ಬಡ್ದೇನು!'

‘ಮುಚ್ಲೇ ಕಂಡಿವ್ನೀ! ಇದ್ದೊರ ಕೈ ಏನು ಕಡ್ಲೆ ಬೆಲ್ಲ ತಿನ್ನೊದಿಲ್ಲಕನ .........ಒದ್ರೆ ಕಸರೇ ಕಡ್ಕೋಬೇಕು’

‘ಕಸರೇ ಕಡೀಸನಂತೆ– ಒದೀಲ ನೋಡ್ತೀನಿ–ಏನು ಭೀಮ ಬೀಮ!’

‘ದವಡೆ ಹಲ್ಲು ಉದುರ್ಸ್ಲ ನೋಡ್ತೀನಿ.......ಉತ್ತರನಂಗಾಡ್ತಾನೆ........ಯಾರೂ ಕಾಣ್ರೂ ಅಂತ!’

‘ಏನ್ಲ ಕಂಡಿರಾದು......ರವಷ್ಟ’

‘ಊರೇ ಕಂಡೆದ ಕಣೋಗೂ ನಿನ್ನ ಬಾಳ!’

‘ಅದೇನೇಳ್ಲ ಒಸಿಯಾ?’[6]

ಇಲ್ಲಿ ಸಣ್ಣ ಮತ್ತು ಪುಟ್ಟರಾಮ ಸ್ನೇಹಿತರಾಗಿರುವುದರಿಂದ ಬೈಗುಳಗಳಲ್ಲಿ ಅಶ್ಲೀಲ ಶಬ್ದಗಳು ಪ್ರಯೋಗವಾಗದಿರುವುದನ್ನು ಗಮನಿಸಬೇಕು. ಗ್ರಾಮೀಣ ಜಟಾಪಟಿಗಳಲ್ಲಿ ಅಶ್ಲೀಲ ಶಬ್ದಗಳದ್ದೆ ಕಾರುಬಾರಾಗಿರುತ್ತದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಸಣ್ಣನಾಗಲಿ, ಪುಟ್ಟರಾಮನಾಗಲಿ ತಾವು ಹಿಂದೆ ಒಬ್ಬರಿಗೊಬ್ಬರು ಮಾಡಿದ್ದ ಸಹಾಯವನ್ನು ಎತ್ತಿ ಆಡಿಲ್ಲ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ಜಗಳದ ಸಂದರ್ಭದಲ್ಲಿ ತಾವು ಹಿಂದೆ ಮಾಡಿದ್ದ ಸಹಾಯವನ್ನು ವೈಭವೀಕರಿಸಿ ಹೇಳಿ ಅವನ ಜನ್ಮವನ್ನೆಲ್ಲ ಜಾಲಾಡಿ ಬಿಡುತ್ತಾರೆ. ಹಾಗೆ ನೋಡಿದರೆ ದುಡುಕು ಸ್ವಭಾವ ಹಳ್ಳಿಗರ ಪ್ರಮುಖ ಮನಸ್ಥಿತಿಯಾಗಿದೆ.

ಸಣ್ಣ, ಪುಟ್ಟರಾಮರ ನಡುವೆ ಸಂಭವಿಸಿದ ಜಗಳಕ್ಕು ಮುನ್ನವೇ ಎಲೆಕ್ಸನ್ನಿನ ಸಂದರ್ಭದಲ್ಲಿ ಕೆಂಪ ತನ್ನ ಕುತಂತ್ರ ವಿದ್ಯೆಯಿಂದ ಅವರಿಬ್ಬರ ನಡುವೆ ದ್ವೇಷದ ಬೀಜವನ್ನು ಬಿತ್ತಿರುತ್ತಾನೆ. ಈ ಸಂದರ್ಭದಲ್ಲಿ ಲೇಖಕರು ಎಲೆಕ್ಸನ್ನಿನಿಂದಾಗಿ ಹಳ್ಳಿಯ ಸಾಮರಸ್ಯ ಬದುಕು ಹೇಗೆ ಕಲುಷಿತಗೊಳ್ಳುತ್ತಿದೆ, ಹಾಗೂ ಕೆಲವು ಕುತಂತ್ರಿಗಳು ತಮ್ಮ ಉದ್ದೇಶ ಸಾಧನೆಗೆ ತಕ್ಕಂತೆ ಚುನಾವಣೆಯನ್ನು ಹೇಗೆ ಬಳಸಿಕೊಳ್ಳುತ್ತಾರೆ ಎಂಬುದರ ಚಿತ್ರಣವನ್ನು ನೀಡುತ್ತಾರೆ. ಇತ್ತೀಚೆಗಂತೂ ಚುನಾವಣೆ ಹಳ್ಳಿಗಳನ್ನು ರಣರಂಗಗಳನ್ನಾಗಿಯೂ ಮಾಡುತ್ತಿದೆ. ಎಲೆಕ್ಸನ್ನಿನ

ಸಂದರ್ಭದಲ್ಲಿ ಸಣ್ಣ ಮತ್ತು ಪುಟ್ಟರಾಮರ ಸ್ನೇಹಕ್ಕೆ ಅಂಟಿಕೊಂಡಿದ್ದ ಕಳಂಕ ಕಥೆಯ ಅಂತ್ಯದಲ್ಲಿ ತೊಳೆಯಲ್ಪಡುತ್ತದೆ. ನೀರಿನ ವಿಷಯವಾಗಿ ತಕ್ಷಣದಲ್ಲಿ ದುಡುಕಿದರೂ ಭೂತಕಾಲದಲ್ಲಿ ನಡೆದ ಕಷ್ಟ ಸನ್ನಿವೇಶಗಳಲ್ಲಿ ಒಬ್ಬರಿಗೊಬ್ಬರು ಹೇಗೆ ಪಾಲುದಾರರಾಗಿದ್ದರು ಎಂಬುದನ್ನು ನೆನೆಯುತ್ತಾರೆ. ಆ ಮೂಲಕ ಪಶ್ಚಾತ್ತಾಪದ ಬೆಂಕಿಯಲ್ಲಿ ಬೆಂದು ಒಂದುಗೂಡುತ್ತಾರೆ. ಹಾಗಾಗಿ ಇವರಿಬ್ಬರ ಸ್ನೇಹಕ್ಕೆ ಪಾವಿತ್ರ್ಯದ ಮೆರಗು ಪ್ರಾಪ್ತಿಯಾಗುತ್ತದೆ.

ರುದ್ರಮ್ಮ, ಚನ್ನಕ್ಕ ಹೂವಿನ ವಿಷಯವಾಗಿ ಜಗಳವಾಡಿ ಪಂಚಾಯಿತಿಯ ತೀರ್ಮಾನದಂತೆ ಏಳುದಿನ ಬಸವಣ್ಣನ ಗುಡಿಗೆ ದೀಪ ಹಚ್ಚುವ ಶಿಕ್ಷೆಗೆ ಒಳಗಾಗಿ ಆ ಮೂಲಕ ತಮ್ಮ ಅಂತರಂಗದ ಜ್ಯೋತಿಯನ್ನು ಬೆಳಗಿಸಿಕೊಂಡದ್ದು 'ದೇವರ ಹೂ' ಕಥೆಯ ಸಾರಾಂಶವಾಗಿದೆ. ಗ್ರಾಮೀಣ ಪರಿಸರದಲ್ಲಿ ಹೆಂಗಸರ ಜಗಳ ಸರ್ವೇಸಾಮಾನ್ಯವಾದ ವಿಷಯವಾಗಿದೆ. ಒಬ್ಬರು ಮತ್ತೊಬ್ಬರ ಮೇಲೆ ಗೂಬೆ ಕೂರಿಸುವ ಕೆಲಸ ಕಂಡುಕಾಣದ ಹಾಗೆ ನಡೆಯುತ್ತಲೇ ಇರುತ್ತದೆ. ಅದರಲ್ಲೂ ವಾರಗಿತ್ತಿಯರ ಬೈಗುಳಗಳು ಸಾದಾರಣವಾಗಿ ಪ್ರತಿನಿತ್ಯವೂ ಜರುಗುತ್ತಲಿರುತ್ತವೆ. ಹಲವು ವೇಳೆ ಮನೆ ಪಾಲಾಗುವುದಕ್ಕೆ ಇವರ ಪಾತ್ರವೇ ಮುಖ್ಯವಾಗಿರುತ್ತದೆ. ಹೆಂಗಸರ ಜಗಳಕ್ಕೆ ಕಾರಣವೇ ಬೇಕಾಗಿರುವುದಿಲ್ಲ. ಒಂದು ಸಣ್ಣ ರಂಧ್ರ ದೊರಕಿದರೂ ಸಾಕು ಅದನ್ನೆ ಕೊರೆದು ದೊಡ್ಡ ಬಿಲವನ್ನಾಗಿಸುತ್ತಾರೆ. ಇಂಥ ಕಡೆ ಗಂಡಸರ ಪ್ರವೇಶವಾದರಂತೂ ಪರಿಸ್ಥಿತಿ ಬಿಗ್ಡಾಯಿಸುತ್ತದೆ. ಪ್ರಸ್ತುತ 'ದೇವರ ಹೂ' ಕಥೆ ವಾರಗಿತ್ತಿಯರ ಬೈಗುಳಗಳಿಂದ ಆರಂಭವಾಗಿ ರುದ್ರಮ್ಮ, ಚನ್ನಕ್ಕರ ಕದನದತ್ತ ಮುಖಮಾಡುತ್ತದೆ.

ರುದ್ರಮ್ಮ ದೇವರ ಪೂಜೆಗೆಂದು ಚನ್ನಕ್ಕನ ತೋಟದಲ್ಲಿ ಹೂವುಗಳನ್ನು ಕೊಯ್ದುಕೊಂಡದ್ದೆ ಕಾರಣವಾಗಿ ಇಬ್ಬರ ನಡುವೆ ಬೈಗುಳಗಳ ಗೋಷ್ಠಿ ಪ್ರಾರಂಭವಾಗುತ್ತದೆ.

"ರುದ್ರಮ್ಮನೂ ತನ್ನ ನಾಲಗೆಯನ್ನು ಚಲಾಯಿಸಿದಳು. ನಾಲಗೆ ಬಿಗಿಹಿಡಿದೆ ಮಾತಾಡು, ನನ್ನ ಗಂಡನ ಸುದ್ದಿಗೆ ಬಂದ್ರೆ ಆಗಬೇಕಾದ್ದು ಆದಾದು!"

"ನಿನ್ನ ಗಂಡಂದೇ ಅಂತ ಸಾವಿರಸಲ ಅಂತೀನಿಕನಮ್ಮ ತಲೆತಗದೀಯ! ಬೋ ನಿಸೂರು ಮಾಡ್ತಿ......."

"ತಕ್ಕೊ ನಿನ್ನ ಗಂಟಲು ಹಾಳಾಗ......ನಿನ್ನ ಹೂವ ನಿನ್ನ ಎದೆಮೇಲೆ ಹಾಕ್ಕೋ. ಆ ಶಿವ ನೋಡ್ತಾನೆ ಕಣ್ಣಿಲ್ವೆ ಅವನಿಗೆ?" ಎಂದು ತನ್ನ ಮಡಿಲನ್ನು ಒದರಿದುದೇ ತಡ, ಕಾಲು ಹಾದಿಯ ಧೂಳಿನಲ್ಲಿ ಕೆಂಪು ಮತ್ತು ಹಳದಿಯ ಚೆಂಡುಮಲ್ಲಿಗೆ ಮತ್ತು ಬಿಳಿಮಲ್ಲಿಗೆ ಮೊಗ್ಗುಗಳು ಬಿದ್ದು ಒದ್ದಾಡಿದವು"

ಚನ್ನಕ್ಕನಿಗೆ, ಹೊಟ್ಟೆಗೆ ಸುಣ್ಣದ ನೀರು ಸುರಿದಂತಾಯಿತು. "ನನ್ನ ಎದೆ ಮೇಲೆ ಸುರೀದು ಬುಟ್ಟು ನೆಲಕ್ಕೆ ಸುರಿದಲ್ಲ ನಿನ್ನ ಮನೆತನದ ಗೆಡ್ಡೆ ಕಿತ್ಹೋಗ! ಅದ್ಕೇ ಅಲ್ವೆ ಗಂಡನ ತಿನ್ಕಂಡು, ಚಿಕ್ಕಂದಿನಿಂದ ಬರೀ ಹಣೆ ಬುಟ್ಕಂಡು ಬಸವೀ ಅಂಗಿರೂದು"

"ಥೂ! ಮುಂಡೆ ನಿನಗೆ ಕುಂಕುಮ ಭಾಗ್ಯೇವು ಅದೆ ಅಂತ ಮೆರೀಬ್ಯಾಡ ನಿನಗೆ ವಾಂತಿಬೇಧಿ ಬರ"

"ಹಲ್ಲಿಡಿದು ಮಾತಾಡು! ಮುಂಡೆ ಅಂತೆ ಮುಂಡೆ, ಅವ್ಳು ಯಾಕಾದಳು"[7] ಹೊನ್ನಣ್ಣನ ಧ್ವನಿ! ಎಲ್ಲ ತಿರುಗಿ ನೋಡಿದರು. ಇವರಿಬ್ಬರ ಜಗಳ ಕೈ, ಬಾಯಿ ನೋಡುತ್ತಿದ್ದವರಿಗೆ ಹೊನ್ನಣ್ಣ ಬಂದದ್ದೇ ಗೊತ್ತಿರಲಿಲ್ಲ. ಹೀಗೆ ಹೆಂಗಸರಿಂದ ಆರಂಭವಾದ ಜಗಳ ಗಂಡಸರ ಪ್ರವೇಶದಿಂದಾಗಿ ಪಂಚಾಯಿತಿಕಟ್ಟೆಯನ್ನು ಹತ್ತುತ್ತದೆ. ಆ ಮೂಲಕ ಜಾತಿಯ ಬಣ್ಣವನ್ನು ಪಡೆದುಕೊಳ್ಳುತ್ತದೆ. ಇಲ್ಲೆಲ್ಲ ರಾಮಣ್ಣನವರ ಗ್ರಾಮೀಣ ಅನುಭವ ಅವರ ದೃಷ್ಟಿಯನ್ನು ಸೂಕ್ಷ್ಮಗೊಳಿಸಿದೆ.

ಹಳ್ಳಿಗಳಲ್ಲಿ ಪಂಚಾಯಿತಿ ಕಟ್ಟೆಗೆ ವಿಶೇಷವಾದ ಸ್ಥಾನಮಾನವಿದೆ. ಕೋರ್ಟು, ಕಛೇರಿಗಳ ಸೋಂಕಿಲ್ಲದೆ ಗ್ರಾಮ್ಯಬದುಕಿನಲ್ಲಿ ಉಂಟಾಗಬಹುದಾದ ಸಂಘರ್ಷಗಳನ್ನು

ಇಲ್ಲಿ ಪರಿಹರಿಸಲಾಗುತ್ತದೆ. ಪಂಚಾಯಿತಿಯ ಮುಖ್ಯಸ್ಥರಿಗೆ ನ್ಯಾಯಾಧೀಶರ ಕಾನೂನು ವಿದ್ಯೆಗಿಂತಲೂ ಮಿಗಿಲಾದ ಜೀವನದ ಗಾಢ ಅನುಭವವಿರುತ್ತದೆ. ಇಾತಿಯ ಸೋಗನ್ನು ಹಾಕಿಕೊಂಡಿದ್ದ ಕೇಸನ್ನು ಸಿದ್ಧವೀರಪ್ಪನವರು ಅತ್ಯಂತ ಸರಳವಾಗಿ ಬಗೆಹರಿಸಿದ ಬಗೆಯನ್ನು ಇಲ್ಲಿ ಗಮನಿಸಬಹುದಾಗಿದೆ. ಇತ್ತೀಚೆಗೆ ಪಂಚಾಯಿತಿ ಕಟ್ಟೆಗಳು ತಮ್ಮ ಘನತೆ, ಗೌರವಗಳನ್ನು ಕಳೆದುಕೊಳ್ಳುತ್ತಿವೆ. ಸಣ್ಣ ಸಣ್ಣ ವಿಷಯಗಳು ಕೋರ್ಟುಮೆಟ್ಟಿಲನ್ನು ಹತ್ತುವ ಪರಿಸ್ಥಿತಿ ಬಂದೊದಗಿರುವುದನ್ನು ಸಿದ್ಧವೀರಪ್ಪನವರ ಮಾತುಗಳು ಸ್ಪಷ್ಟಪಡಿಸುತ್ತವೆ.

"ಹೌದು ಕಣ್ರಪ್ಪ, ನಮ್ಮೂರಿಂದ ಎಂಥೆಂಥ ಕೇಸೋ ಕೋರ್ಟುಗೋಗವೆ. ಮಂಡ್ಯದಲ್ಲಿರುವ ಲಾಯರುಗಳೆಲ್ಲಾರುಗೂ ನಮ್ಮೂರ ಹೆಸರು ಕಿವಿಗೆ ಬಿದ್ರೆ ನೆಟ್ಟಗಾದವಂತೆ? ದೇವರ್ಗೆ ಮೂರು ಹೂವು ಕೊಯ್ದು ಜಗಳ ಆಡಿ ಕೋರ್ಟು ಹತ್ತಿದ ಕೀರ್ತಿಯೂ ನಮ್ಮೂರ್ಗೆ ಬರಬೇಕು ಅಂತ್ಲೇ ನಿಮ್ಮಿಷ್ಟ"[8]

ಇಲ್ಲಿ ಕಥೆಗಾರರು ಕೋರ್ಟ್ ಸಂಸ್ಕೃತಿಯನ್ನು ತಿರಸ್ಕರಿಸಿ ಪಂಚಾಯಿತಿಯ ಮೂಲಕ ಉತ್ತಮ ತೀರ್ಪು ಹೊರಬೀಳುವಂತೆ ಮಾಡಿದ್ದಾರೆ. ಆ ಮೂಲಕ ಗ್ರಾಮ್ಯ ಬದುಕಿನ ಸಾಂಪ್ರದಾಯಿಕ ವ್ಯವಸ್ಥೆಯೊಂದನ್ನು ಉಳಿಸಬೇಕೆಂಬ ಕಳಕಳಿಯನ್ನು ಹೊಂದಿದ್ದಾರೆ.

'ದೇವರ ಹೂ' ಕಥೆಯಲ್ಲಿ ಗಮನಿಸಬೇಕಾದ ಮತ್ತೊಂದು ಪ್ರಮುಖ ಅಂಶವೆಂದರೆ ಬಸವನಗುಡಿ. ವ್ಯವಸಾಯ ಪ್ರಧಾನವಾದ ಗ್ರಾಮೀಣ ಬದುಕಿನಲ್ಲಿ ಜಾನುವಾರುಗಳಿಗೆ ವಿಶಿಷ್ಟವಾದ ಸ್ಥಾನವಿದೆ. ಅದರಲ್ಲು ಹಸುವಿಗೆ ಪೂಜ್ಯವಾದ ಮಾತೃಸ್ಥಾನವಿದೆ. ತಮ್ಮ ಬದುಕಿನ ಅವಿಬಾಜ್ಯ ಅಂಗವಾಗಿರುವ ಕಾಮಧೇನು ಗ್ರಾಮೀಣರಲ್ಲಿ ದೈವದ ಸ್ಥಾನಮಾನವನ್ನು ಪಡೆದುಕೊಂಡಿದೆ. ಹೀಗಾಗಿ ಹಳ್ಳಿಗಳಲ್ಲಿ ಬಸವನ ವಿಗ್ರಹವನ್ನು ಹೊಂದಿರುವ ಗುಡಿಗಳು ನಿರ್ಮಾಣವಾಗಿವೆ. ಬೇರೆ ಬೇರೆ ದೇವಸ್ಥಾನಗಳಲ್ಲಿಯೂ ನಂದಿ ವಿಗ್ರಹಗಳು ಸ್ಥಾಪನೆಗೊಂಡಿರುತ್ತವೆ. ಇಲ್ಲಿ

ರಾಮಣ್ಣನವರು ಪಾಳು ಬಿದ್ದ ಬಸವನ ಗುಡಿಯ ಚಿತ್ರವನ್ನು ನೀಡುವ ಮೂಲಕ ಬದಲಾಗುತ್ತಿರುವ ಜೀವನ ಮೌಲ್ಯಗಳ ಚಿತ್ರಣವನ್ನು ನೀಡುತ್ತಾರೆ. ಕೃಷಿ ಕ್ಷೇತ್ರ ಯಾಂತ್ರೀಕರಣಗೊಳ್ಳುತ್ತಿರುವುದರಿಂದ ತಲೆಮಾರಿನಿಂದ ತಲೆಮಾರಿಗೆ ಹಸುವಿನ ಬಗೆಗಿನ ದೃಷ್ಟಿಕೋನ ಬದಲಾಗುತ್ತಿದೆ. ಇಲ್ಲಿ ಕಥೆಗಾರರು ಪಾಳುಬಿದ್ದ ಬಸವನ ಗುಡಿಯನ್ನು ಬೆಳಗುವುದರ ಮೂಲಕ ಒಡೆದ ಮನಸ್ಸುಗಳು ಒಂದುಗೂಡುವಂತೆ ಮಾಡುತ್ತಾರೆ.

ಆಸ್ತಿಯನ್ನು ಪಾಲುಮಾಡುವುದರ ವಿಚಾರವಾಗಿ ವೆಂಕಟೇಗೌಡ ಹಾಗೂ ಆತನ ಮಗನಾದ ರಮೇಶನ ನಡುವೆ ಉಂಟಾದ ಬಿಕ್ಕಟ್ಟು ಪರಿಹಾರವಾಗುವುದು 'ನೆಲದ ಉಸಿರು' ಕಥೆಯ ತಿರುಳಾಗಿದೆ. ಎಂ.ಎ. ಓದಿ ಮೈಸೂರಿನಲ್ಲಿ ವಾಸವಾಗಿರುವ ರಮೇಶನ ಮನಸ್ಥಿತಿಗೂ ಅನಕ್ಷರಸ್ಥ ಹಳ್ಳಿಗನಾದ ವೆಂಕಟೇಗೌಡನ ಮನೋಭಾವಕ್ಕೂ ಇರುವ ವ್ಯತ್ಯಾಸವನ್ನು ಲೇಖಕರು ಸೂಕ್ಷ್ಮವಾಗಿ ತೆರೆದಿಟ್ಟಿದ್ದಾರೆ. ವೆಂಕಟೇಗೌಡ ತುಂಬು ಸಂಸಾರದಲ್ಲಿ ಬಾಳುತ್ತಿದ್ದರೆ, ರಮೇಶ ಚಿಕ್ಕ ಕುಟುಂಬವನ್ನು ಅಪೇಕ್ಷಿಸುತ್ತಾನೆ. ಇಲ್ಲಿ ಎರಡು ತಲೆಮಾರುಗಳ ಬದಲಾದ ಜೀವನ ಶೈಲಿಯ ಚಿತ್ರಣ ಕಂಡು ಬರುತ್ತದೆ. ವೆಂಕಟೇಗೌಡರ ಹಿನ್ನಲೆಯಲ್ಲಿ ಕಥೆಗಾರರು ನೀಡುವ ಭತ್ತದ ಗದ್ದೆಯ ಸೊಬಗು ಓದುಗರ ಕಣ್ಣು ತುಂಬುತ್ತದೆ.

"ವೆಂಕಟೇಗೌಡರು ನೆಲದ ಒಡಲ ಸಿರಿಯನ್ನು ತಮ್ಮ ಕಣ್ಣುಗಳಲ್ಲಿ ತುಂಬಿಕೊಳ್ಳುವಂತೆ ನೋಡಿದರು. ತಮ್ಮ ಎಂಟು ಎಕರೆ ಗದ್ದೆ ಬಯಲಿಗೆ ಇಳಿದರು. ತೆವರಿಯ ಹುಲ್ಲಿನ ನುಣುಪಿಗೆ ಕಾಲುಜಾರಿ ಬೀಳುವ ಭಯವನ್ನು ಲೆಕ್ಕಿಸದೆ, ವಡೆಕಿತ್ತು ಹಾಲುದುಂಬಿ ನೆರೆದು ಮದುವೆಗೆ ಅಣಿಯಾದ ಹೆಣ್ಣು ಅಪರಿಚಿತ ಗಂಡನ್ನು ಕಂಡಾಗ ನಾಚಿಕೆಯ ಕಣಜವಾಗಿ ತಲೆತಗ್ಗಿಸಿ ನೆಲವನ್ನು ದೃಷ್ಟಿಸುವಂತೆ ನೆಲದ ಕಡೆ ಬಾಗಿರುವ ಗೊನೆಗಳನ್ನು ತೆವರಿಯ ಮೇಲೆ ಕುಳಿತು ಬೊಗಸೆಯಲ್ಲಿ ತೆಗೆದುಕೊಂಡು ಮೃದುವಾಗಿ ಒತ್ತಿದರು. ಆನಂದವೋ ಆನಂದ. ಅನುಭವಿಸಿ ಸುಖಪಟ್ಟರು. ಗರಿಗಳ ಮೇಲೆ ನವಿರಾಗಿ ಬೆರಳಾಡಿಸಿದರು. ಭತ್ತವೆಲ್ಲಾ ಕಾಯಾಗಿ

ಹಣ್ಣಾಗಿ ನೆಲಕಚ್ಚಿ ಹೊಂಬಣ್ಣಕ್ಕೆ ತಿರುಗಿ ಮುಗಿಲು ನೋಡಲು ತೊಡಗಿದಾಗ ಕುಯ್ದು ಹೊರೆಕಟ್ಟಿ ಸಾಗಿಸಿ, ಮೆದೆಹಾಕಿ, ಕಣ ಮಾಡಿ ಬಡಿದು, ರಾಶಿ ಹಾಕಿ ತೂರಿದಾಗ ಕಣದ ಮಧ್ಯದಲ್ಲಿ ಮೂಡುವ ನೂರು ಖಂಡುಗಳಿಗಿಂತಲೂ ಹೆಚ್ಚಾದ ಬತ್ತದ ರಾಶಿಯನ್ನು ಕೊರೆಯುವ ಚಳಿಯಲ್ಲಿ ಕಾಯುತ್ತ ಕಣದಲ್ಲಿ ಮಲಗುವುದು ಅದೆಂಥ ಸೊಗಸು! ಪುಣ್ಯ ಮಾಡಿರಬೇಕು: ಒಕ್ಕಲು ಮಕ್ಕಳಾಗಿ ಹುಟ್ಟುವುದಕ್ಕೆ: ಎಂದು ಗೌಡರು ಅಭಿಮಾನಪಟ್ಟು ತಲೆದೂಗಿದರು".[9]

ಇಂಥ ಪರಿಸರದಿಂದ ವೆಂಕಟೇಗೌಡರು ಎಂದಿಗೂ ಹೊರಗುಳಿಯಲಾರರು. ಏಕೆಂದರೆ ಅಲ್ಲಿಯ ನೆಲ ಅವರ ಉಸಿರಿನಂತಿದೆ.

"ಮೇಲೇಗೌಡ ತಾತ ತಿರುಗಾಡಿದ ನೆಲ. ಅವನು ಉತ್ತು ಬಿತ್ತು ಹಸನು ಮಾಡಿದ ಬೆಳೆ ಬೆಳೆದ ಜಾಗ. ಬೆಳೆಯನ್ನು ಸುಗ್ಗಿಯಲ್ಲೆ ಒಕ್ಕಣೆ ಮಾಡುವಾಗ 'ದೇಯಿ' ಎಂದು ಜೋಳಿಗೆ ಹಿಡಿದು ಬಂದವರಿಗೆ ಮೊರಗಟ್ಟಲೆ, ಕೊಳಗಗಟ್ಟಲೆ, ರಾಗಿಯನ್ನು ನೀಡುತ್ತಿದ್ದಂತಹ ಗಂಡು ಮಗನ ಆಸ್ತಿ. ಅವನು ಸತ್ತ ಮೇಲೆ ಭೂಮಿತಾಯಿಯ ಒಡಲು ಸೇರಿದ ಜಾಗ. "ಇದನ್ನು ಪಾಲು ಮಾಡಲಾರೆ. ಈ ಜಾಗ ಬಿಟ್ಟು ರಮೇಶ, ನಾನು ಮೈಸೂರಿಗೆ ಬರಬೇಕೇನೋ? ವೆಂಕಟೇಗೌಡರಿಗೆ ಉಸಿರು ಕಟ್ಟಿದಂತಾಯಿತು. ಈ ವಾತಾವರಣವನ್ನು ತ್ಯಜಿಸಿ ತಾವು ಮೈಸೂರು ಪಟ್ಟಣದ ಜೀವನ ಒಗ್ಗಿಸಿಕೊಳ್ಳುವುದು ಎಂದರೆ ಮೀನು ನೀರು ಬಿಟ್ಟು ಒಣ ನೆಲದಲ್ಲಿ ಬದುಕಿದಂತೆ ಎಂದು ಕಣ್ಣೀರು ಒರೆಸಿಕೊಂಡರು."[10]

ಹೀಗೆ ಪ್ರತಿಯೊಬ್ಬ ರೈತನು ತಾನು ಹುಟ್ಟಿ ಬೆಳೆದ ನೆಲದೊಂದಿಗೆ ಭಾವನಾತ್ಮಕ ಸಂಬಂಧವನ್ನು ಹೊಂದಿಯೇ ಇರುತ್ತಾನೆ. ಇಂಥ ಬಾಂದವ್ಯವನ್ನು ರಾಮಣ್ಣನವರು ಮೀನು, ನೀರಿನ ಸಂಬಂಧಕ್ಕೆ ಹೋಲಿಸಿರುವುದು ಅರ್ಥಪೂರ್ಣವಾಗಿದೆ.

'ನೆಲದ ಉಸಿರು' ಕಥೆಯಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಮಹಾನವಮಿ ಹಬ್ಬಕ್ಕೆ ಬರುವುದಿಲ್ಲವೆಂದ ರಮೇಶ ಹಳ್ಳಿಗೆ ಬಂದ ಕಾರಣವಾಗಲೀ, ಬೇರೆಯ ಕಥೆಗಳಲ್ಲಿ ಕಂಡುಬರುವಂತಹ ಪಶ್ಚಾತ್ತಾಪದ ಮನಸ್ಥಿತಿಯಾಗಲಿ ಅವನಲ್ಲಿ ಕಂಡು ಬರುವುದಿಲ್ಲ. ಹಾಗೆ ನೋಡಿದರೆ ರಾಮಣ್ಣನವರ ಎಲ್ಲಾ ಕಥೆಗಳಲ್ಲಿಯೂ ಒಡೆದ ಮನಸ್ಸುಗಳು ಒಂದುಗೂಡಿಯೇ ತೀರುತ್ತವೆ. ಸಂಘರ್ಷದಿಂದ ಸಹಕಾರದೆಡೆಗೆ ತುಡಿಯುತ್ತವೆ. ಬೇಂದ್ರೆಯವರು ಹೇಳುವ,

ಸರಸ ಜನನ
ವಿರಸ ಮರಣ
ಸಮರಸವೇ ಜೀವನ.

ಎಂಬ ಜೀವನ ತತ್ವವನ್ನು ಸಾರುತ್ತವೆ.

**ಅಡಿಟಿಪ್ಪಣಿಗಳು:**

1. ಬೆಸಗರಹಳ್ಳಿ ರಾಮಣ್ಣ : ಕನ್ನಂಬಾಡಿ ; ಪುಟ : 10
2. ಅದೇ ; ಪುಟ ; 3
3. ಅದೇ ; ಪುಟ ; 15
4. ಅದೇ ; ಪುಟ ; 19
5. ಅದೇ ; ಪುಟ ; 14
6. ಅದೇ ; ಪುಟ ; 40
7. ಅದೇ ; ಪುಟ ; 76,77
8. ಅದೇ ; ಪುಟ ; 80
9. ಅದೇ ; ಪುಟ ; 150
10. ಅದೇ ; ಪುಟ ; 152

## 4. ಜಾತಿಸೂತಕ

ಸಮಾಜದಲ್ಲಿ ಕೆಲಸಕಾರ್ಯಗಳು ವ್ಯವಸ್ಥಿತವಾಗಿ ಸುಗಮವಾಗಿ ನಡೆದುಕೊಂಡು ಹೋಗಲಿ ಎಂಬ ಉದ್ದೇಶದಿಂದಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಗಗಳು ಉಗಮಿಸಿದವು. ಆರಂಭದಲ್ಲಿ ಈ ವೃತ್ತಿಗಳ ನಡುವೆ ತಾರತಮ್ಯ ಭಾವನೆ ಇರಲಿಲ್ಲ. ಆ ಕ್ಷೇತ್ರಗಳಲ್ಲಿ ಪ್ರತಿಭೆಯಿದ್ದ ವ್ಯಕ್ತಿಗಳು ತಮಗೆ ಬೇಕಾದ ವೃತ್ತಿಯನ್ನು ಅನುಸರಿಸಬಹುದಾಗಿತ್ತು. ಈ ಕಾರಣದಿಂದಾಗಿಯೇ ಮಾತಂಗಿಯೇ ಮೊದಲಾದ ಹಲವಾರು ಋಷಿ ಪತ್ನಿಯರು ಮಾದಿಗ ಜನಾಂಗದವರಾಗಿದ್ದರು. ಕಾಲಕಳೆದಂತೆ ಈ ವರ್ಗಗಳ ನಡುವೆ ಮೇಲುಕೀಳಿನ ಭಾವನೆ ನುಸುಳತೊಡಗಿ, ಹುಟ್ಟಿನ ಆಧಾರದ ಮೇಲೆ ಜಾತಿಗಳು ನಿರ್ಧರಿಸಲ್ಪಟ್ಟವು. ಬ್ರಾಹ್ಮಣರು ಕಷ್ಟವನ್ನು ಪಡದೆ ಇಡೀ ಸಮಾಜದ ನಿಯಂತ್ರಕರಾದರು. ಮೇಲಿನ ಮೂರು ವರ್ಗಗಳು ಉಣ್ಣುವ ವಸ್ತುವನ್ನು ಬೆಳೆಯುವುದರಿಂದ ಹಿಡಿದು ಅವರು ಹೊರ ಹಾಕುವ ತ್ಯಾಜ್ಯವಸ್ತುಗಳನ್ನು ಸ್ವಚ್ಛಗೊಳಿಸುವವರೆಗಿನ ಕೆಲಸದ ಹೊರೆ ಶೂದ್ರರ ಹೆಗಲ ಮೇಲೆ ಬಿದ್ದು ಆ ಮೂಲಕ ಸಮಾಜದಲ್ಲಿ ಅಸ್ಪೃಶ್ಯರೆನ್ನಿಸಿಕೊಂಡರು. ಹೀಗೆ ಸಾಮಾಜಿಕವಾಗಿ ರೂಪುಗೊಂಡ ಸ್ಪೃಶ್ಯ, ಅಸ್ಪೃಶ್ಯ ಭಾವನೆ ಆರ್ಥಿಕ, ರಾಜಕೀಯ, ಧಾರ್ಮಿಕ, ಕ್ಷೇತ್ರಗಳ ಅಸಮಾನತೆಗೂ ಕಾರಣವಾಯಿತು.

ರಾಮಣ್ಣನವರ ಕಥೆಗಳು ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯ, ಕಿರುಕುಳಗಳನ್ನು ಮನಕರಗುವಂತೆ ಚಿತ್ರಿಸುತ್ತವೆ. ಆ ಮೂಲಕ ದಲಿತರ ನೋವು ಸ್ಫೋಟಗೊಂಡು ಪ್ರತಿಭಟನೆಯಾಗಿ ಸೆಟೆದು ನಿಲ್ಲುತ್ತದೆ. ಹಲವು ಕಡೆ ದಲಿತರ ಈ ಬಂಡಾಯ ಕೃತಕ, ಅವಾಸ್ತವವೆನಿಸಿದರೂ ಭವಿಷ್ಯದ ಬದುಕಿಗೆ ಅನಿವಾರ್ಯ ಎಂಬಂತೆ ಚಿತ್ರಣಗೊಂಡಿದೆ. 'ಜೀತ', 'ಕಳೆ', 'ಅಭಿಮಾನ', 'ಗರ್ಜನೆ', 'ಹರಕೆಯ ಹಣ', 'ಗಾಂಧಿ ಸಂತಾನ', 'ಕಕರನ ಯುಗಾದಿ', 'ಬೆಟ್ಟದ ಮೇಲೊಂದು ಮನೆಯ ಮಾಡಿ', 'ಚಲುವನ ಪರಂಗಿ ಗಿಡಗಳು',–ಇವು ದಲಿತರ ಬದುಕನ್ನು ಕುರಿತ

ಕಥೆಗಳಾಗಿವೆ. "ದಲಿತ ಬದುಕನ್ನು ಕುರಿತು ಇಷ್ಟೊಂದು ಕತೆಗಳನ್ನು ಬರೆದಿರುವ ದಲಿತೇತರ ಲೇಖಕರಿಲ್ಲ ಎನ್ನಬಹುದು. ಈ ಕತೆಗಳಲ್ಲಿ ದಲಿತ ಜೀವನ ಸಾಕಷ್ಟು ವಿವರ ವಿವರವಾಗಿ ವಿವಿಧ ಮಗ್ಗಲುಗಳಿಂದ ವರ್ಣಮಯವಾಗಿ ರಾಗೋಜ್ಜುಲತೆಯಿಂದ ಕೃತಿಗೊಂಡಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ದಲಿತರ ಬದುಕು ಪರಿವರ್ತನೆಗೆ ಒಳಗಾಗುವುದನ್ನು ಈ ಕತೆಗಳು ದಾಖಲಿಸುತ್ತವೆ. ಹೊಸ ಹೊಸ ಕಾನೂನುಗಳು ಹೇಗೆ ಬಡವರ ಬಾಳನ್ನು ಬೆಳಗಲು ಹೊರಟಿವೆ. ಅವುಗಳನ್ನು ಯಾವ ರೀತಿ ಸಮಾಜದ ದುಷ್ಟಶಕ್ತಿಗಳು, ಊಳಿಗಮಾನ್ಯ ಪದ್ಧತಿಯ ಜಮೀನ್ದಾರಿ ವ್ಯವಸ್ಥೆಯ ಸ್ವಾರ್ಥಿಗಳು ದುರುಪಯೋಗ ಪಡಿಸುತ್ತಿವೆ. ಹಾಗೂ ಹಾಳುಮಾಡುತ್ತಿವೆ. ಎಂಬುದನ್ನು ಮನಕರಗುವಂತೆ, ಒಂದು ಪಕ್ಷ ಆ ಪಾತ್ರಗಳೇ ಈ ಕತೆಗಳನ್ನು ಓದುವುದಾದರೆ ಅವರೂ ತಮ್ಮ ಬಗ್ಗೆ ತಾವೇ ಅಸಹ್ಯಪಡುವಂತೆ, ಸಹಾನುಭೂತಿ ತೋರುವಂತೆ, ಇದು ಕೂಡದು, ಸಲ್ಲದು ಎಂಬಂತೆ ಬರೆಯುವ ಲೇಖಕರ ಶಕ್ತಿ ಅದ್ವಿತೀಯವಾದದ್ದು. ರಾಮಣ್ಣನವರದು ಮೂಲತಃ ಬಂಡಾಯ ಪ್ರವೃತ್ತಿಯ ಮನಸ್ಸು. ಇಲ್ಲಿ ಹೇಳಿದ ಕಥೆಗಳೆಲ್ಲ ಬಂಡಾಯ ಸಾಹಿತ್ಯ ಸಮ್ಮೇಳನ ಸಂಘಟನೆಗೆ ಮೊದಲೇ ಪ್ರಕಾಶಿತವಾಗಿದ್ದವು ಎನ್ನುವುದು ಗಮನೀಯ".[1]

"ಮೇಲೆ ಹೆಸರಿಸಿದ ಕಥೆಗಳಲ್ಲಿ ದಲಿತರನ್ನು ಹೊಡೆಯುವ, ಕೊಂದು ಹಾಕುವ, ಅವರ ಹೆಣ್ಣುಮಕ್ಕಳನ್ನು ಭೋಗಿಸುವ, ಅವರನ್ನು ಜೀತದಾಳುಗಳನ್ನಾಗಿ ಸುಲಿಗೆ ಮಾಡುವವರೆಲ್ಲ ಜಮೀನ್ದಾರರು, ಅರ್ಥಾತ್ ಗೌಡರು ಮತ್ತು ಪಟೇಲರು. ಕಥೆಗಾರ ರಾಮಣ್ಣ ಮಾನವೀಯ ದೃಷ್ಟಿಯಿಂದ ಕಲೆಯ ನೆಲೆಯಲ್ಲಿ ಈ ಕ್ರೌರ್ಯವನ್ನೆಲ್ಲ ಬಹಿರಂಗಪಡಿಸಿದ್ದಾರೆ. ಕುವೆಂಪು, ಬಸರಾಜಕಟ್ಟೀಮನಿ ತರುವಾಯ ತನ್ನ ಜನಾಂಗವನ್ನು ದಿಟ್ಟವಾಗಿ ಬೆತ್ತಲು ಮಾಡಿದ ಲೇಖಕ ರಾಮಣ್ಣ. ಜೊತೆಗೆ ಈ ಕಥೆಗಳಲ್ಲಿ ದಲಿತವರ್ಗ ತನ್ನನ್ನು ತಾನೇ ಕಂಡುಕೊಳ್ಳಲು ನಡೆಸುವ ಮಹಾನ್ ಸಂಘರ್ಷದ ಸ್ವರ್ನ ಕಿರಣಗಳಿವೆ. ಈಗಾಗಲೇ ಆಗುತ್ತಿರುವ ಬದಲಾವಣೆಯ ನಿಬಿಡ ಚಿತ್ರಣವಿದೆ. ಪರಿವರ್ತನೆಯನ್ನು ರಾಮಣ್ಣನವರಷ್ಟು ಕಲಾತ್ಮಕವಾಗಿ ಸೆರೆಹಿಡಿಯುವ ಕಥೆಗಾರರನ್ನು ಕನ್ನಡ ಕಾಣಬೇಕಾಗಿದೆ. ಅವರ ಪಾತ್ರಗಳು ಸಿದ್ಧಾಂತದ ನಿರ್ಜೀವ

ಬೊಂಬೆಗಳಾಗಿರದೆ ರಾಗ ದ್ವೇಷಗಳ ಜೀವಂತ ಪ್ರತಿಮೆಗಳಾಗಿವೆ."[2] ಎಂಬ 'ಕನ್ನಂಬಾಡಿ' ಯ ಮುನ್ನುಡಿಯಲ್ಲಿನ 'ಭಗವಾನ್' ರವರ ಮಾತುಗಳು ದಲಿತರನ್ನು ಕುರಿತ ರಾಮಣ್ಣನವರ ಕಥೆಗಳಿಗೆ ಹಿಡಿದ ಕನ್ನಡಿಯಾಗಿದೆ.

"ಸಾಂಸ್ಕೃತಿಕ ಆಶಯಗಳನ್ನು ನಾಶಮಾಡುವ ಜೀತಪದ್ಧತಿಯು ರಾಮಣ್ಣ ಅವರನ್ನು ಗಾಢವಾಗಿ ಕಾಡಿದೆ. ಈಗಲೂ ಅದು ಮಂಡ್ಯದ ಸುತ್ತಮುತ್ತ ತನ್ನ ಕ್ರೌರ್ಯವನ್ನು ಮುಂದುವರೆಸಿದೆ. ಇಂಥ ಸಂದರ್ಭಗಳಲ್ಲಿ 'ಜೀತ' ಕಥೆಯಲ್ಲಿ ಜೀತದಲ್ಲಿರುವ ಚಿಕ್ಕರಾಮ ಮತ್ತು ಪುಟ್ಟಸ್ವಾಮಿ ತಮ್ಮ ಬದುಕಿನ ಗ್ರಹಿಕೆಗಳನ್ನು ಅನ್ಯರ ಆಶ್ರಯದಲ್ಲಿ ರೂಪಿಸಿಕೊಳ್ಳಬೇಕಾದ ದುರಂತದಲ್ಲಿದ್ದಾರೆ. ಜೀತ ಬಿಟ್ಟು ಬದುಕುವ ಅವರ ಪ್ರಯತ್ನವನ್ನು ಪ್ರಕೃತಿಯೇ ವಿರೋಧಿಸುತ್ತಿದೆ. ಹೀಗೆ ಪ್ರಕೃತಿಯು ಮನುಷ್ಯನ ಚಲನೆಯನ್ನು ತಡೆಹಿಡಿಯುತ್ತಿರುವುದು ಕನ್ನಡದಲ್ಲಿ ಬಹುಶಃ ಇದೊಂದೇ ಕಥೆಯಲ್ಲಿ ಅನಿಸುತ್ತಿದೆ".[3]

ತಮ್ಮ ಮನೆಯಲ್ಲಿ ಜೀತಕ್ಕಿದ್ದ ಚಿಕ್ಕರಾಮನ ಸಾಮಾನ್ಯ ತಪ್ಪಿಗಾಗಿ ಅವನನ್ನು ದನ ಬಡಿದ ಹಾಗೆ ಬಡಿಯುವ ದೇವಿರಯ್ಯನ ಕ್ರೌರ್ಯ ಎಂಥ ಕಲ್ಲು ಹ್ಲದಯದಲ್ಲಿಯೂ ಕರುಣೆಯನ್ನು ಉಕ್ಕಿಸುತ್ತದೆ. ಒಡೆಯನಿಂದ ಬಿಡಿಸಿಕೊಂಡು ಓಡಿದ ಚಿಕ್ಕರಾಮನನ್ನು ಮತ್ತೊಬ್ಬ ಆಳು ದಾಸ ಹಿಡಿದು ಕೊಡುವುದು ಪರಿಸ್ಥಿತಿಯ ದುರಂತಕ್ಕೆ ಹಿಡಿದ ಕನ್ನಡಿಯಾಗಿದೆ. ದಲಿತರು ಅನ್ಯ ಮಾರ್ಗವಿಲ್ಲದೆ ತಮ್ಮ ಮಕ್ಕಳನ್ನು ಜೀತಕ್ಕಿರಿಸುತ್ತಾರೆ. ಸ್ವತಂತ್ರವಾಗಿ ಬದುಕುವ ಇಚ್ಛೆ ಇದ್ದರೂ ಅದಕ್ಕೆ ಅವಕಾಶವಿಲ್ಲ. "ಏನು ಮಾತಾಡಿ ನೀನು ನನ್ಗೆ ಸಂಕಟ ಇಲ್ಲ ನನ್ನ ಮಕ್ಕಳ ಜೀತಕ್ಕಿರಿಸೋದು ಅಂತ ತಿಳ್ಕಂಡ. ನನ್ನ ಎದೆ ಮೇಲೆ ರೋಣು ಹೊಡೆದಂಗಾಯ್ತದೆ, ನಮ್ಮ ಜೀತದವರು ಅಂತ, ಅವರು-ಇವರು ಕರೀವಾಗ"[4] ಎಂಬ ಚಿಕ್ಕರಾಮನ ತಂದೆಯ ಮಾತು ಪ್ರತಿಯೊಬ್ಬ ದಲಿತನ ಎದೆಯಾಳದ ನೋವಾಗಿದೆ. ಇಂಥ ಜೀತದಿಂದಾಗಿ ದಲಿತರ ಕುಟುಂಬ ಹೇಗೆ ಛಿದ್ರವಾಗಿದೆ ಎಂಬುದನ್ನು ರಾಮಣ್ಣನವರು ಚಿತ್ರಿಸಿದ್ದಾರೆ.

"ಅಣ್ಣ ತಮ್ಮೂರಿನ ಸಾಹುಕಾರನ ಮನೆಯಲ್ಲಿ, ನಾನು ಚಿಕ್ಕರಾಮ ಇಲ್ಲಿ. ಇನ್ನುಳಿದ ಮರಿ ಅಂಕ ಯಾವ ಊರಲ್ಲಿ, ಯಾರ ಮನೇಲಿ ಜೀತ ಮಾಡಬೇಕೋ? ತನ್ನ ಮನೆತನದ ಜೀತದ ಸಾಲನ್ನು ನೆನೆಯುತ್ತಿದ್ದಂತೆಯೇ"[5] ಪುಟ್ಟಸ್ವಾಮಿಗೆ ಮನುಷ್ಯ ಜನ್ಮವೇ ಬಾರವೆನಿಸುತ್ತದೆ. ತಮ್ಮ ಪರಿಸ್ಥಿತಿಯನ್ನು ನೆನೆದು ಹೇಸಿಗೆ ಪಟ್ಟುಕೊಳ್ಳುತ್ತಾನೆ. "ಥೂ! ಇಂಥ ಅನಿಷ್ಟ ಬಾಳು ಬಾಳಬಾರದು. ಈ ಮನ್ಸನ ಜನ್ಮವೇ ಬ್ಯಾಡ. ತಿರ್ಗ ಹುಟ್ಟಿದರೆ ಮರವಾಗೋ, ಕಲ್ಲಾಗೋ, ಮೂಗುಬಸವನಾಗೋ ಹುಟ್ಟಬೇಕು. ಈ ಮನ್ಸನ ಜನ್ಮ ಏಳೇಳು ಜನ್ಮಕ್ಕೂ ಬೇಡ"[6] ಎಂದುಕೊಳ್ಳತ್ತಾನೆ.

ಹಸಿವು, ನಿದ್ರೆ, ಬಾಯಾರಿಕೆಯಂತೆಯೇ ಕಾಮವು ಮನುಷ್ಯನ ಮೂಲಭೂತ ವಾಚಿಛೆಯಾಗಿದೆ. ಗ್ರಾಮೀಣ ಬದುಕಿನ ರೀತಿರಿವಾಜುಗಳನ್ನು ಮೀರಿ ನಡೆಯುವ ಗಂಡು-ಹೆಣ್ಣಿನ ಸಂಬಂಧಗಳ ಚಿತ್ರಣವನ್ನು ರಾಮಣ್ಣನವರ ಕಥೆಗಳು ಸೂಕ್ಷ್ಮವಾಗಿ ಬಿಂಬಿಸುತ್ತವೆ. ಗೌಡರು ಅಥವಾ ಪಟೇಲರು ಕೆಳವರ್ಗದ ಹೆಣ್ಣುಮಕ್ಕಳನ್ನು ಯಾವುದೇ ಅಡೆತಡೆಯಿಲ್ಲದೆ ಅನುಭವಿಸುತ್ತಾರೆ. ಹಾಗೆ ಅನುಭವಿಸಲು ಆ ಮನೆಯುವರ ಸಹಕಾರವೂ ದೊರಕುತ್ತದೆ.

"ಕೆಂಪಿಗೆ ನಾಚಿಕೆ. ಅವಳ ಅವ್ವ ಬೇಲೂರಿಗೆ ಒಳಗೊಳಗೇ ನಗು. ಈ ಕಷ್ಟಪಡುವುದರ ಬದಲು; ಇಷ್ಟು ಹೊತ್ತಿಗೆ ಬತ್ತೀನಿ ಚಿಲಕ ಹಾಕಬ್ಯಾಡ ಅಂತ ಹೇಳಬ್ಯಾಡ್ದೆ. ಊರಿಗೆ ಗೌಡರೆನ್ನಿಸಿದ ಇವರಿಗೆ ಅವರಿಗೆ ಅಷ್ಟು ಗುಂಡಿಗೆ ಇಲ್ವೆ?"[7]

ಗೌಡರು, ಪಟೇಲರಿಗೆ ಹೆಣ್ಣು ಮಕ್ಕಳನ್ನು ಇಟ್ಟುಕೊಳ್ಳುವುದು ಪ್ರತಿಷ್ಠೆಯ ಸಂಕೇತವಾಗಿತ್ತು. ಗರಿಕೆಯ ಹೆಂಡತಿ ಕೆಂಪಿ, ಕಕರನ ಮಗಳು, 'ಸೋಲು'ಕಥೆಯ ಸುಬ್ಬಕ್ಕ, ಹೀಗೆ ಇವರೆಲ್ಲರೂ ಗೌಡರ ಜೊತೆ ಸಂಬಂಧವನ್ನು ಇಟ್ಟುಕೊಂಡಿದ್ದ ಪಾತ್ರಗಳಾಗಿವೆ. ಸೋಲು ಕಥೆಯ ಸುಬ್ಬಕ್ಕ ದೊಡ್ಡೇಗೌಡರ ಜೊತೆಗೆ ಸಂಬಂಧವನ್ನು

ಹೊಂದಿದ್ದರೆ, ಅವನ ಮಗ ನಾಗಣ್ಣ ಸುಬ್ಬಕ್ಕನ ಮಗಳು ಕೆಂಪಿಯ ಜೊತೆ ಸಂಬಂಧವನ್ನು ಹೊಂದಿರುವುದು ವ್ಯವಸ್ಥೆಯ ಮುಂದುವರಿಕೆಗೆ ಸಂಕೇತವಾಗಿದೆ. ಅಲ್ಲದೆ 'ಹರಕೆಯ ಹಣ' ಕಥೆಯಲ್ಲಿ ಪಟೇಲರು ಕೆಂಪಿಯನ್ನು ಅನುಭವಿಸುತ್ತಿರುವುಲ್ಲದೆ, ತನಗೆ ಹುಟ್ಟಿದವಳು ಎಂದು ಹೇಳುತ್ತಿದ್ದ 'ಚಲುವಿಯ'ನ್ನು ಅನುಭವಿಸಲು ಪ್ರಯತ್ನಿಸುವುದು ಸಂಬಂಧಗಳ ದುರಂತಕ್ಕೆ ಹಿಡಿದ ಕನ್ನಡಿಯಾಗಿದೆ.

ಗೌಡರು ಕೆಳವರ್ಗದ ಹೆಣ್ಣುಮಕ್ಕಳನ್ನು ಯಾವುದೇ ಅಡೆತಡೆಯಿಲ್ಲದೆ ಅನುಭವಿಸುತ್ತಿದ್ದರೆ, ಕೆಳವರ್ಗದ ಜನ ಮೇಲ್ವರ್ಗದ ಹೆಣ್ಣುಗಳ ಜೊತೆ ಗೌಪ್ಯವಾಗಿ ಕಳ್ಳಸಂಬಂಧವನ್ನು ಹೊಂದಿರುತ್ತಿದ್ದರು. 'ಕಳೆ' ಕಥೆಯಲ್ಲಿ ಶಿವಲಿಂಗೇಗೌಡರ ಮಗಳು ಲಲಿತ ಮನೆಯ ಆಳು 'ನಿಂಗ'ನ ಜೊತೆಗೆ ಸಂಬಂಧವನ್ನು ಹೊಂದಿರುತ್ತಾಳೆ. ಕಥೆಯ ಆರಂಭದಿಂದಲೇ ತೆಂಗಿನ ತೋಟ ಹಾಗೂ ಶಿವಲಿಂಗೇಗೌಡರ ಮನೆಯ ನಡುವೆ ಸಂಬಂಧವನ್ನು ಕಲ್ಪಿಸಿ ಕಥೆಯನ್ನು ಹೇಳುವ ಕೌಶಲ ತುಂಬಾ ಚನ್ನಾಗಿದೆ.

ನವೋದಯ ಸಾಹಿತ್ಯ ಸಂದರ್ಭದಲ್ಲಿ ಮೇಲ್ವರ್ಗದ ಗಂಡು ಕೆಳವರ್ಗದ ಹೆಣ್ಣಿನ ಜೊತೆ ಸಂಬಂಧವನ್ನು ಹೊಂದಿರುವಂತೆ ಚಿತ್ರಿತವಾಗಿದೆ, ದಲಿತ-ಬಂಡಾಯ ಕಾಲಘಟ್ಟದಲ್ಲಿ ರಚಿತವಾದ ಕೃತಿಗಳಲ್ಲಿ ಮೇಲ್ವರ್ಗದ ಹೆಂಗಸರು ಆಳಿನ ಜೊತೆಗೆ ಸಂಬಂಧವನ್ನು ಹೊಂದಿರುತ್ತಾರೆ. ಇದು ಆಯಾ ಕಾಲಘಟ್ಟದ ಲೇಖಕರ ಸಂಕುಚಿತ ದೃಷ್ಟಿಕೋನಕ್ಕೆ ಹಿಡಿದ ಕನ್ನಡಿಯಾಗಿದೆ. ರಾಮಣ್ಣನವರು ಇಂಥ ಮಿತಿಯನ್ನು ಮೀರಿ ಎರಡು ರೀತಿಯ ಸಂಬಂಧಗಳನ್ನು ಅವುಗಳ ಸೂಕ್ಷ್ಮಗಳ ಹಿನ್ನಲೆಯಲ್ಲಿ ಚಿತ್ರಿಸುತ್ತಾರೆ. ಯಾವ ಕಥೆಯಲ್ಲಿಯೂ ಕೂಡ ಕಾಮ ವಾಚ್ಯವಾಗಿ ಪ್ರಕಟಗೊಳ್ಳುವುದಿಲ್ಲ.

'ಕಕರನ ಯುಗಾದಿ' ಕನ್ನಡದ ಶ್ರೇಷ್ಠ ಕತೆಗಳಲ್ಲಿ ಒಂದಾಗಿದೆ. ಸಾಮಾಜಿಕ, ಸಾಂಸ್ಕೃತಿಕ ಕಾಳಜಿ ಇರುವ ಲೇಖಕ ಮಾತ್ರ ಇಂಥ ಕತೆಯನ್ನು ಬರೆಯಲು ಸಾಧ್ಯ. ಪ್ರಸ್ತುತ ಕತೆಯಲ್ಲಿ ದಲಿತನಾದ ಕಕರನ ಮೂಲಕ ಹಲವಾರು ಸಾಮಾಜಿಕ ಕುರೂಪಗಳು ಚಿತ್ರಣಗೊಂಡಿವೆ. ಕಕರನ ಬಡತನ, ಜೋಯಿಸರ ಡಾಂಬಿಕತೆ, ಮಡಿಮೈಲಿಗೆ, ಬಂಡಾಯದ ಧ್ವನಿ, ಸರ್ಕಾರಿ ಆಸ್ಪತ್ರೆಯ ಭ್ರಷ್ಟಾಚಾರ, ಮೊದಲಾದ ಅಂಶಗಳನ್ನು ಕತೆ ತನ್ನಲ್ಲಿ ಗರ್ಭೀಕರಿಸಿಕೊಂಡಿದೆ. ಹಸಿವು, ಅನಾರೋಗ್ಯ, ಮೈಲಿಗೆಗಳ ತಳದಲ್ಲಿ ಸಿಕ್ಕಿ ನರಳುತ್ತಿರುವ ಕಕರನ ಕೌಟುಂಬಿಕ ಚಿತ್ರಣ ಕರಳು ಬಿರಿಯುವಂತಿದೆ. ಬಡಕಲಾದ ನಾಲ್ಕು ಗಂಡು ಮಕ್ಕಳು, ದಮ್ಮು ಬಂದು ಕೆಮ್ಮುತ್ತ ನರಳುತ್ತಿರುವ ಹೆಂಡತಿ, ಗೌಡನ ಮಗನ ಕಾಮುಕ ಕಣ್ಣಿಗೆ ಬಲಿಯಾಗಿ ಬಸುರಾಗಿರುವ ಮಗಳು, ಹೀಗೆ ಕಕರನ ಕುಟುಂಬದ ಒಂದೊಂದು ಸಂಗತಿಯೂ ಅವನನ್ನು ಬದುಕಿನಿಂದ ಹಿಂದಕ್ಕೆ ತಳ್ಳುತ್ತವೆ. ವರ್ಷದ ಕೊನೆಯ ಹಬ್ಬವಾದ ಯುಗಾದಿಗೆ ಮಾಡಿಕೊಳ್ಳುವ ಸಿದ್ಧತೆ ಅವನ ಬದುಕಿನ ಅಂತ್ಯಕ್ಕೂ ಕಾರಣವಾಗುತ್ತದೆ. ಕಕರನ ಸಾವಿನಲ್ಲೂ ಗಮನಿಸಬೇಕಾದ ದುರಂತದ ಎಳೆಯೊಂದಿದೆ. ಕಕರನ ಮಗಳು ಸಾಯುತ್ತೇನೆ ಎಂದು ಹೇಳಿದಾಗ ಕಕರ

"ಕೆರೇಲಿ ಬಾವೀಲಿ ಸಾಯೋವಷ್ಟು ನೀರಿಲ್ಲ!

ಇಸಕುಡ್ದು ಬುಡ್ತೀನಿ

ಇಸತಂದು ಕೊಡೋರು ಯಾರು? ಅದೇನು ಬಿಟ್ಟಿ ಇಟ್ಟಾಡದೆ?"[8] ಎಂದು ಹೇಳುವ ಮಾತು ದಲಿತರು ಆತ್ಮಹತ್ಯೆ ಮಾಡಿಕೊಳ್ಳುವ ಸ್ಥಿತಿಯಲ್ಲೂ ಇಲ್ಲ ಎಂಬ ಅರ್ಥವನ್ನು ಧ್ವನಿಸುತ್ತದೆ. ಕಕರ ಸಾಯುವುದಕ್ಕೂ ಜೋಯಿಸರ ಬಾವಿಯನ್ನು ಆಶ್ರಯಿಸಬೇಕಾಯಿತು. ಪ್ರಸ್ತುತ ಸಂದರ್ಭದಲ್ಲಿ 'ಬಡವರು ಸತ್ತರೆ ಸುಡಲಿಕ್ಕೆ ಸೌದಿಲ್ಲೊ' ಎಂಬ ಜನಪದ ತ್ರಿಪದಿ ನೆನಪಿಗೆ ಬರುತ್ತದೆ.

"ಎಲ್ಲ ಅಮಾವೀಯ ವಿಷಯದಲ್ಲೂ ಉನ್ನತ ಶಿಖರದಲ್ಲಿರುವ ಜೋಯಿಸರು ಕಕರನಂಥ ತಿರಸ್ಕೃತ ವ್ಯಕ್ತಿಯಲ್ಲೂ ತನ್ನ ಉದ್ಯೋಗದ ಬಗೆಗೆ ಭರವಸೆಯನ್ನು

ಹುಟ್ಟಿಸುವ ಪ್ರಯತ್ನವನ್ನು ಮಾಡಬೇಕಾಗಿದೆ. ಪರ ವ್ಯಾಕುಲತೆಗೆ ಪರಿಹಾರ ಕಾಣಿಸುವ ಈತ ತನ್ನ ಕುಟುಂಬದೊಳಗೇ ಇರುವ ದುರಂತವನ್ನು ಬಗೆಹರಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಇದೊಂದೇ ತಿಳಿಸುತ್ತದೆ ಕಕರನಂಥವರು ನಂಬಿರುವ ಜೋಯಿಸನ ಶಕ್ತಿಯು ಡಾಂಬಿಕವಾದುದು ಎಂದು. ಆದರೆ ಇಂಥ ಡಾಂಬಿಕ ಅರಿವನ್ನು ತನ್ನ ಉಳಿವಿಗಾಗಿ ಬಳಸಿಕೊಳ್ಳುವ ವ್ಯವಸ್ಥೆಯು ತನ್ನೊಳಗೆ ಇರುವ ಗೊಂದಲಗಳನ್ನು ಆತಂಕಗಳನ್ನು ಭವಿಷ್ಯದ ಒಳಿತಿಗಾಗಿ ಬಚ್ಚಿಟ್ಟುಕೊಳ್ಳುತ್ತದೆ. ಎಂಬುದನ್ನು ಶೋಷಿತ ಆವರಣವನ್ನು ಇದಿರಾಗಿಸಿ ಹೇಳುವ ಈ ಕತೆ ಕನ್ನಡದ ಶ್ರೇಷ್ಠ ಕತೆಗಳಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದೆ. ಶ್ರೇಷ್ಠತೆಯ ಮಾನದಂಡಗಳು ಹೇಗೆ ಸ್ಥಾಪಿಸಲ್ಪಟ್ಟರೂ ಇದರ ಸ್ಥಾನ ಪಲ್ಲಟವಾಗಲಾರದು ಎಂಬ ಭರವಸೆಯೇ ಈ ಕತೆಯ ಅಭಿವ್ಯಕ್ತಿಗೆ ಸಂದ ಗೌರವವಾಗಿದೆ”[9].

ಜೋಯಿಸರ ಡಾಂಬಿಕತೆ ಚಲಾವಣೆಯಲ್ಲಿರುವುದಕ್ಕೆ ಕಕರನ ಅಜ್ಞಾನವೂ ಕಾರಣವಾಗಿದೆ. ಈತ ನಂಬುತ್ತಿವುದರಿಂದಲೇ ಜೋಯಿಸರು ಸುಳ್ಳು ಭವಿಷ್ಯದ ಬಗೆಗೆ ಭರವಸೆಯನ್ನು ಹುಟ್ಟಿಸಿ ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದಾರೆ. “ತನ್ನ ಕುಟುಂಬದ ವಿಷಯದಲ್ಲಿ ಜೊಯಿಸರು ಹೇಳಿದ್ದ ಭವಿಷ್ಯವನ್ನು ಮಗಳ ಬದುಕು ಸುಳ್ಳು ಮಾಡಿದೆಯಾದರೂ ಅವರ ಮೇಲಿನ ತನ್ನ ಭರವಸೆಯನ್ನು ಪೂರ್ಣವಾಗಿ ಕಳೆದುಕೊಂಡಿಲ್ಲ. ಆದ್ದರಿಂದ ಮಳೆ ಬೆಳೆಯನ್ನು ವಿಚಾರಿಸುತ್ತಾನೆ. ತಾನೆ ಬಳಲಿ ದಾವಾರಿದಾಗ ಧರೆ ಹತ್ತಿ ಉರಿಯುತ್ತಿರುವುದರ ಬಗೆಗೆ, ದನ ಕರುಗಳು ಹಕ್ಕಿಪಕ್ಷಿಗಳು ಸಂಕಟಪಡುತ್ತಿರುವುದರ ಬಗೆಗೆ ಕಳಕಳಿ ವ್ಯಕ್ತಪಡಿಸುತ್ತಾನೆ. ಆದರೆ ಇವನ ಸಂಕಟಕ್ಕೆ ವಸ್ತುಸ್ಥಿತಿಯ ಅರಿವೇ ಇಲ್ಲದವನಂತೆ ಮದುವೆ ಮನೆಯಿಂದ ಸಾಕಷ್ಟು ಹೊತ್ತು ಹಿಂದಿರುಗುತ್ತಿರುವ ಜೋಯಿಸರು ಬಹಳ ಧಾರಾಳವಾಗಿ ಪ್ರತಿಕ್ರಿಯಿಸುತ್ತಾರೆ. ಈ ಸಂದರ್ಭದಲ್ಲಿ ಹೊಟ್ಟೆಗೆ ಹೆದರಿ ಮದುವೆ ಊಟಕ್ಕೆ ಲಗ್ಗೆ ಹಾಕಿರುವ ಕೇರಿ ಹುಡುಗರಿಗೂ, ನೆಪದ ಮೂಲಕ ತನಗೆ ಬೇಕಾದುದೆಲ್ಲವನ್ನೂ ಕಿತ್ತುಕೊಂಡು ಬರುವ ಜೋಯಿಸರಿಗೂ ಅಂತರ್ವಾಹಿನಿಯಾದ

ಸಂಘರ್ಷದ ಸಂಬಂಧವಿದೆ. ಬೆಸಗರಹಳ್ಳಿ ರಾಮಣ್ಣ ಇಂಥವನ್ನು ನೇರವಾಗಿ ಹೇಳದೆ ವಿವರಗಳನ್ನು ಕೊಡುವ ಸಂದರ್ಭದಲ್ಲಿ ಸೂಕ್ಷ್ಮವಾಗಿ ಇಡುತ್ತಾರೆ."[10]

ಅಲ್ಲದೆ ಶ್ರಮ ಮತ್ತು ಪ್ರತಿಫಲದ ನಡುವೆ ಇರಬೇಕಾಗಿದ್ದ ನೇರಸಂಬಂಧ ಇಲ್ಲಿ ತದ್ವಿರುದ್ಧವಾಗಿರುವುದು ಗೋಚರವಾಗುತ್ತದೆ. ತಾನು ಕೇಳಿದ ಹಣ ಸಿಗಬಹ್ಮದೆಂದು ಹಸಿದಿದ್ದರೂ ಸೌದೆಯನ್ನು ಹೊತ್ತು ಬರುವ ಕಕರ ಈ ದೇಶದ ಕೋಟ್ಯಾಂತರ ಶ್ರಮಿಕರ ಪ್ರತಿನಿಧಿಯಂತೆ ಕಾಣುತ್ತಾನೆ. ಅದರಲ್ಲೂ ಕಕರ ಒಂದು ದೊಡ್ಡ ಸೌದೆ ಹೊರೆಯನ್ನು ಕಟ್ಟಿಕೊಂಡ ಎಂಬ ಲೇಖಕರ ಮಾತು ಮೋಸ, ಕಪಟವನ್ನು ತಿಳಿಯಾದ ಅವನ ಮುಗ್ಧತೆಯನ್ನು ಎತ್ತಿ ಹಿಡಿಯುತ್ತದೆ. ಮದುವೆಯು ಹಣದ ಬೆಲೆಯಲ್ಲಿ ನಿರ್ಧಾರವಾಗುತ್ತಿರುವುದನ್ನು ಆಶ್ಚರ್ಯದಿಂದ ಗಮನಿಸುತ್ತಾನೆ. ತನ್ನ ಕೇರಿಯ ಜನ ಅನ್ನಕ್ಕಾಗಿ ನಾಯಿಗಳಂತೆ ಕಾದು ನಿಂತಿರುವುದನ್ನು ಕಂಡು ದುಃಖವಾಗುತ್ತದೆಯಾದರೂ ಅವನ ಸ್ಥಿತಿಯೂ ಅದೇ ಆಗಿರುವುದರಿಂದ ಸಮರ್ಥಿಸುವುದಾಗಲಿ ತಿರಸ್ಕರಿಸುವುದಾಗಲಿ ಸಾಧ್ಯವಾಗುವುದಿಲ್ಲ.

ಕಕರ ಹಸಿವಿನ ಸ್ಥಿತಿಯಲ್ಲಿ ಹೊತ್ತು ತಂದ ಸೌದೆಯ ಹೊರೆಯನ್ನು ನೋಡಿ ಜೋಯಿಸರ ತಾಯಿ ಅನುಕಂಪ ಪಡುವುದಿರಲಿ ಅವನನ್ನು ನೋಡಿದ ತಕ್ಷಣವೇ ಹೇಸಿಗೆಯನ್ನು ಕಂಡಂತೆ ಮುಖ ಸಿಂಡರಿಸಿಕೊಳ್ಳುತ್ತಾಳೆ. ಕಕರ ತಂದ ಸೌದೆ ಹೊರೆಗೆ ಸಗಣಿ ನೀರನ್ನು ಚುಮುಕಿಸುವುದರ ಮೂಲಕ ಶುದ್ಧಿಗೊಳಿಸುತ್ತಾಳೆ. ಆದರೆ ಈಕೆ ಮುಂದೆ ತನ್ನ ಮನೆಯೊಳಗೆ ಶುದ್ಧೀಕರಣಕ್ಕೆ ಒಳಗಾಗಬೇಕಾದ ಅನಿವಾರ್ಯಕ್ಕೆ ಸಿದ್ಧವಾಗಬೇಕಾಗುತ್ತದೆ. ಜೋಯಿಸರು ಕಕರನ ಉಸಿರು ತಾಕದಂತೆ ದೂರ ನಿಲ್ಲುವುದು, ಮದುವೆ ಮನೆಯಲ್ಲಿ ಕಕರನ ಕೇರಿಯವರಿಗೆಲ್ಲ ಕೊನೆಯಲ್ಲಿ ಊಟ ಬಡಿಸುವುದು, ಸೌದೆಗೆ ಸಗಣಿ ನೀರು ಹಾಕಿ ಶುದ್ಧೀಕರಿಸುವುದು ಮೊದಲಾದ ಸಂದರ್ಭಗಳನ್ನು ಗಮನಿಸಿದರೆ ದಲಿತನ ಬದುಕು ಸುತ್ತಲಿನ ಸಮಾಜದೊಡನೆ ಇನ್ನು ಕರುಳು ಬಳ್ಳಿಯ ಸಂಬಂಧವನ್ನು ಹೊಂದಿಲ್ಲ ಎಂಬುದರ ಅರಿವಾಗುತ್ತದೆ. ಸರ್ಕಾರಿ ಆಸ್ಪತ್ರೆಯ ಉಚಿತ ವೈದ್ಯಕೀಯ ಸೇವೆಯು ಅವನನ್ನು ಶೋಷಿಸುತ್ತದೆ.

"ತನ್ನ ಬಂಜೆತನವನ್ನು ಆಗಾಗ್ಗೆ ಎತ್ತಿ ಆಡುವ ಅತ್ತೆಯ ಹಿಂಸೆಯನ್ನು ತಡೆಯಲಾರದೆ ಜೋಯಿಸರ ಹೆಂಡತಿ ಯಶೋಧಮ್ಮ ಮನೆ ಹಿಂದಿನ ಬಾವಿಗೆ ಹಾರಿಕೊಳ್ಳುತ್ತಾಳೆ. ಅದೇ ಸಮಯಕ್ಕೆ ಬರುವ ಕಕರನನ್ನು ಬೇಡಿಕೊಳ್ಳುವ ಸರದಿ ಈಗ ಜೋಯಿಸರದಾಗುತ್ತದೆ. ಯಾಕೆಂದರೆ ಸಾಯುವ ಬದುಕನ್ನು ಸಾಹಸದಿಂದ ಉಳಿಸಿಕೊಳ್ಳುವುದು ಅವರಿಗೆ ಸಾಧ್ಯವಾಗುವುದಿಲ್ಲದಿರುವುದರಿಂದ ಅನಿವಾರ್ಯವಾಗಿ ಕಕರನಿಗೆ ಶರಣಾಗುತ್ತಾರೆ. ಕಕರನ ಬದುಕಿನ ಅಳಿವು ಉಳಿವಿನ ಸಂದರ್ಭದ ಹಣದ ಬೇಡಿಕೆಯನ್ನು ಕೇವಲವಾಗಿ ತೆಗೆದುಕೊಳ್ಳುವ ಜೋಯಿಸರು ಈಗ ತಕ್ಷಣದಲ್ಲಿ ಈಡೇರಿಸಬೇಕಾದ ತಮ್ಮ ಬೇಡಿಕೆಯನ್ನು ಅವನ ಮುಂದಿಡುತ್ತಾರೆ. ಉಳಿದ ಸಂದರ್ಭಗಳಲ್ಲಿ ಅವನ ಅಸ್ತಿತ್ವವು ಮೈಲಿಗೆಯಾದರೆ, ಈಗ 'ಭಗವಂತನ ದೃಷ್ಟಿಯಲ್ಲಿ ಎಲ್ಲ ಒಂದೇ' ಆಗಿ ಕಾಣುತ್ತದೆ. ಆದ್ದರಿಂದ ಕಕರ ಜೋಯಿಸರ ಮನೆಯೊಳಗಿನಿಂದ ಪ್ರವೇಶಿಸಿ ಬಾವಿಗೆ ಜಿಗಿಯುತ್ತಾನೆ. ಯಶೋಧಮ್ಮ ಕಕರನನ್ನು ತಬ್ಬಿಕೊಳ್ಳುವುದರಲ್ಲಿ ಎರಡು ಸಾಧ್ಯತೆಗಳಿವೆ. ಒಂದು–ಸಾಯಬೇಕೆಂಬ ತನ್ನ ಇಚ್ಛೆಯನ್ನು ಬದುಕಿಸಲು ಬಂದ ಕಕರ ವಿರೋಧಿಸಿದ ಎಂಬುದು; ಇನ್ನೊಂದು–ಜೋಯಿಸರ ಮೇಲಿನ ರೊಚ್ಚನ್ನು ಹೊಲೆಯನನ್ನು ಅಪ್ಪಿಕೊಳ್ಳುವುದರಲ್ಲಿ ತೀರಿಸಿಕೊಳ್ಳುವುದು, ಮತ್ತು ಫಲವಂತಿಕೆಯಲ್ಲಿ ಗಂಡ ನಿಷ್ಕ್ರಿಯ ಎಂಬುದನ್ನು ವ್ಯಕ್ತಪಡಿಸುವುದು. ಆದ್ದರಿಂದ ಜೋಯಿಸರು ಹೆಂಡತಿಯ ಆ ಕ್ರಿಯೆಯನ್ನು ಕಂಡು ಹೇಸಿಗೆ ಪಟ್ಟುಕೊಳ್ಳುತ್ತಾರೆ. ಅವರನ್ನು ಕಂಡರೆ ಕತ್ತಿಮಸೆಯುವ ಶಾನುಭೋಗರು ಈ ಸಂದರ್ಭಕ್ಕೆ ಅಸೂಯೆಯಲ್ಲಿ ಪ್ರತಿಕ್ರಿಯಿಸಿದರೆ, ಗಂಡನನ್ನು ಕಳೆದುಕೊಂಡ ಚೆನ್ನಿಯ ಎದುರು ಬ್ರಾಹ್ಮಣ್ಯಕ್ಕಾಗಿ ಬಲಿಯಾದ ಕಕರನ ಪುಣ್ಯದ ಬಗೆಗೆ ಮಾತನಾಡುತ್ತಾರೆ. ಚೆನ್ನಿ ಇನ್ನು ತನ್ನ ಮಕ್ಕಳ ಗತಿ ಏನೆಂದು ದುಃಖಿಸಿದಾಗ "ದೇವರಿದ್ದಾನೆ' ಎಂದು ಹೇಳುವುದು, ಎಂಥ ದುರಂತದಲ್ಲೂ ಬ್ರಾಹ್ಮಣ ಶಾಹಿ ತನ್ನ ಬಿಗಿಮುಷ್ಟಿಯನ್ನು ಬಿಟ್ಟುಕೊಡಲಾರದು ಎಂಬುದಕ್ಕೆ ಸಾಂಕೇತಿಕವಾಗಿದೆ. ಬದುಕಿನ ಕಡುಕಷ್ಟಗಳಿಗೆ ಮಣಿಯದ ಕಕರ, ಯಶೋಧಮ್ಮನ ಇಚ್ಚಾಶಕ್ತಿಗೆ ಶರಣಾಗುತ್ತಾ.

ಈ ಕತೆಯ ವಿಶಿಷ್ಟ ಅನುಭವ ದ್ರವ್ಯದ ಮೂಲಕ ಬೆಸಗರಹಳ್ಳಿ ರಾಮಣ್ಣ ತಾವು ಒಬ್ಬ ಸಮರ್ಥ ಸೃಜನಶೀಲ ಲೇಖಕ ಎಂಬುದನ್ನು ಸಮರ್ಥಿಸಿಕೊಂಡಿದ್ದಾರೆ"[11].

'ಕಕರನ ಯುಗಾದಿ' ಕತೆ ಹಲವಾರು ಸೂಕ್ಷ್ಮಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡಿರುವುದು ಮೇಲಿನ ವಿವರಣೆಯಿಂದ ತಿಳಿದುಬರುತ್ತದೆ. ಅದೇ ರೀತಿ ಕತೆಯಲ್ಲಿ ಬಂಡಾಯದ ಧ್ವನಿಯು ಅಂತರ್ಗತವಾಗಿದೆ ಎಂಬುದನ್ನು ಮರೆಯಬಾರದು. ಜೋಯಿಸರ ಸೊಸೆ ಬಂಜೆಯಾಗಿರುವುದಕ್ಕೂ ಅದೇ ಸಂದರ್ಭದಲ್ಲಿ ಕಕರನಿಗೆ ಮೊಮ್ಮಗ ಹುಟ್ಟುವುದಕ್ಕೂ ಸಂಬಂಧವಿದೆ. ಅದರಲ್ಲೂ ಕಕರನ ಮೊಮ್ಮಗ ಬೆಂಕಿಯ ಕೆಂಡದಂತೆ ರಗರಗನೆ ಹೊಳೆಯುತ್ತಿತ್ತಂತೆ. ಅಲ್ಲದೆ ಕಕರನ ಸಾವು ಹಾಗೂ ಆತನ ಮೊಮ್ಮಗನ ಹುಟ್ಟು ಒಂದೇ ದಿನ ಜರುಗುತ್ತದೆ. ಆ ಮೂಲಕ ಜಾತಿಯ ಸೂತಕ ಕಳೆಯಲಿ ಎಂಬುದೇ ಲೇಖಕರ ಆಶಯ.

"'ಗರ್ಜನೆ', 'ಹರಕೆಯ ಹಣ', 'ಗಾಂಧಿ ಸಂತಾನ', ಬೆಟ್ಟದ ಮೇಲೊಂದು ಮನೆಯ ಮಾಡಿ', ಮತ್ತು ಚಲುವನ ಪರಂಗಿ ಗಿಡಗಳು', ಈ ಐದು ಕತೆಗಳು ಶೋಷಣೆಯು ಬದುಕುವುದನ್ನೇ ಕಿತ್ತುಕೊಳ್ಳುವ ತಿರಸ್ಕರಿಸುವ ನೆಲೆಯನ್ನು ಪ್ರತಿಭಟಿಸುತ್ತವೆ. ರಾಮಣ್ಣ ಅವರ ಕಥನಕಲೆಯಲ್ಲಿ ಇದು ಒಂದು ಚೇತೋಹಾರಿಯಾದ ಘಟ್ಟ. ಬಂಡಾಯ ಲೇಖಕನೊಬ್ಬ ವರ್ತಮಾನದ ಕ್ರೌರ್ಯಗಳನ್ನು ಭವಿಷ್ಯದ ಸಾಧ್ಯತೆಗಳನ್ನು ಸಾಮಾಜಿಕ ಸ್ಥಿತ್ಯಂತರದಲ್ಲಿ ಖಚಿತಗೊಳಿಸಿಕೊಳ್ಳುತ್ತಿರುವ ಧೈರ್ಯವನ್ನು ತೋರಿದ್ದಾನೆ. ಎಂಬುದನ್ನು ಇದು ಸೂಚಿಸುತ್ತದೆ. 'ಗರ್ಜನೆ' ಕತೆಯ ಮರಿನಂಜ, ಗಂಡ ಸತ್ತವಳಿಗೆ ಪಟೇಲರಿಂದ ಹುಟ್ಟಿದವನು. ನಿಂಗಣ್ಣನ ಮಗಳು ಪಾರ್ವತಿಯನ್ನು ಮದುವೆಯಾಗಬೇಕೆಂಬ ಕೆಚ್ಚಿನಲ್ಲಿ, ಆತನ ಗಡಸು ವ್ಯಕ್ತಿತ್ವ ಸೆಟೆದು ನಿಲ್ಲುತ್ತದೆ. ತನ್ನ ಹುಟ್ಟಿನ ಬಗೆಗೆ ಅಣಕ ಮಾಡುವವರನ್ನು ಪ್ರತಿಭಟಿಸುತ್ತಲೇ, ಅದನ್ನು ಪಟೇಲರೊಡನೆ ಗುರುತಿಸಿಕೊಳ್ಳುವ ಎಷ್ಟು ಖಚಿತತೆಯನ್ನು ಪಡೆಯುತ್ತದೆಯೆಂದರೆ, ತಾನು ಅಂದುಕೊಳ್ಳುವ ಬದುಕನ್ನು

ಖಂಡಿತವಾಗಿ ಪಡೆಯುತ್ತೇನೆ ಎಂಬ ಅವನ ಗರ್ಜನೆಯನ್ನು ಆ ಪರಿಸರ ವಿರೋಧವಿಲ್ಲದೆ ಒಪ್ಪಿಕೊಳ್ಳುತ್ತದೆ."[12]

'ಗಾಂಧಿಸಂತಾನ'ದ ಮೆಣಸ ಈ ನಾಡು ಕಾಣುವ ಅಪರೂಪದ ಶ್ರೀಸಾಮಾನ್ಯ ಪ್ರತಿಭೆಗಳಲ್ಲಿ ಒಬ್ಬ. ಅವನು ವ್ಯವಸ್ಥಿತವಾಗಿ ತನ್ನ ಸುತ್ತ ಬೇಲಿ ಕಟ್ಟಿಕೊಂಡಿರುವ ಪ್ರತಿಷ್ಠಿತರ ಟೊಳ್ಳು ವಾದಭೂಮಿಕೆಯನ್ನು ಪ್ರಶ್ನಿಸುತ್ತಾನೆ. ಜತೆಗೆ ಮೇಲು ಜಾತಿಯು ಹುಟ್ಟು ಹಾಕಿರುವ ಪೌರಾಣಿಕ ನಂಬಿಕೆಗಳನ್ನು ಕೂಡ ತಿರಸ್ಕರಿಸುತ್ತಾನೆ.

"ಬ್ರಾಹ್ಮಣರು ಬ್ರಂದೇವರ ಯಾವ ಜಾಗದಿಂದ ಹುಟ್ಟಿದೋರು?"

"ಮುಖದಿಂದಲೋ ಬಾಯಿಂದಲೋ ಅಂತ ತಿಳಿದೋರು ಹೇಳ್ತಾರಕಣೋ ಕಪ್ರ ನನ್ನ ಮಗ್ನೆ"

"ಎಲ್ಲಾದ್ರೂ ಮುಖದೇಲಿ, ಕಾಲೇಲಿ ಮಕ್ಕಳಾದವೇ!"

"ಬ್ರಂದೇವರು ಹೆಂಗ್ಸಲ್ಲ ಕಣ ಗಂಡಸರು!"

"ಅಲಿ, ಗಂಡಸು ಮಕ್ಕಳೆತ್ತಾನ! ಹುಟ್ಟಿಸ್ತಾನಪ್ಪ!"[13]

ಯಜಮಾನ ಪುಟ್ಟಣ್ಣ ಹಾಗೂ ಮೆಣಸನ ಈ ಸಂಬಾಷಣೆಯಲ್ಲಿ ಪುಟ್ಟಣ್ಣನ ಮಾತುಗಳು ಅವನ ಜನಾಂಗದ ಮುಗ್ಧತೆಯನ್ನು ವ್ಯಕ್ತಪಡಿಸಿದರೆ, ಮೆಣಸನ ಆಲೋಚನೆ ಆ ಜನಾಂಗದಿಂದ ಮೂಡಿಬಂದ ಪ್ರತಿಭೆಯ ಪ್ರತಿಭಟನೆಯಾಗಿದೆ. ಒಂದು ದೇಶದ ಶೋಷಕ ವಲಯದ ಆಶಯಗಳನ್ನು ಮೆಣಸ ಉದ್ದೀಪಿಸಿ ತಿರಸ್ಕರಿಸುವುದು, ಶೋಷಿತ ಜಗತ್ತಿಗೆ ಅವನ ಅನಿವಾರ್ಯತೆಯನ್ನು ಅರಿವಾಗಿಸುತ್ತದೆ. ಆದ್ದರಿಂದ ಈ ಅರಿವನ್ನು ಕೊಡುವ ಪ್ರತಿಭಟನೆಯ ನೆಲೆಗಳನ್ನು ಸೃಷ್ಟಿಸುವ ಅವನನ್ನು ವ್ಯವಸ್ಥೆಯು ಭೂಗತ ಮಾಡುವುದು ಅದರ ಪ್ರಬಲೇಚ್ಛೆಯನ್ನು ವ್ಯಕ್ತಪಡಿಸುತ್ತದೆ. ಆದರೆ ಮೆಣಸನ ಅವ್ವ ಮಗನ ತಲೆ ನೆಟ್ಟಗಾಗಿ ಊರಿಗೆ ಬರಲೆಂದು ದೇವರಿಗೆ ಪೂಜೆ ಮಾಡಿಸುವುದು, ಅವಳ

ಮುಗ್ಧತೆಯನ್ನು ತೋರುವ ಹಾಗೆಯೇ, ವ್ಯವಸ್ಥೆಯು ದೈವೀ ಆಯಾಮವನ್ನು ತನ್ನ ಒಳಿತಿಗಾಗಿ ಬಳಸಿಕೊಳ್ಳುತ್ತಿರುವ ವ್ಯಂಗವೂ ಇದೆ. ಈ ಕತೆಯಲ್ಲಿ ಹೊಲೆಯನಿಗೆ ಅರಿವು ಬಂದುದರ ವಿರುದ್ಧ ಎಲ್ಲ ಮೇಲು ಜಾತಿಗಳೂ ಒಂದುಗೂಡುತ್ತವೆ ಎಂಬುದನ್ನು ರಾಮಣ್ಣ ಬಹಳ ಸೂಕ್ಷ್ಮವಾಗಿ ಹಿಡಿದಿಟ್ಟಿದ್ದಾರೆ.

ತಮ್ಮ ವಿರದ್ಧ ಬಂಡೆದ್ದ ಮೆಣಸನನ್ನು ಪ್ರಬಲ ಶಕ್ತಿಗಳು ಮುಗಿಸಿದ ರೀತಿಯಂತು ಕ್ರೂರವಾದುದಾಗಿದೆ. “ಹೆಣ ಹೆಂಗಸೋ ಗಂಡಸೋ ತಿಳಿಯದು. ತಲೆ ಬೋಳಿಸಿದೆ, ಮೂಗು ಕೊಯ್ದಿದೆ, ಮುಂಗೈಗಳಿಲ್ಲ, ಕಾಲುಗಳನ್ನು ಮಂಡಿಯವರೆಗೆ ಕತ್ತರಿಸಿದೆ. ಮೈಮೇಲೆ ಹಸಿರು ಉಯ್ದಿರುವ ಗುರುತುಗಳಿಲ್ಲ”[14]. ಹೀಗೆ ತನ್ನ ಕರುಳ ಕುಡಿಯನ್ನು ಹೆತ್ತ ಕರುಳು ಕೂಡ ಗುರುತಿಸದ ಹಾಗೆ ಮೆಣಸನನ್ನು ಕೊಚ್ಚಿಹಾಕಲಾಗಿರುತ್ತದೆ.

“ಹರಕೆಯ ಹಣ” ಒಂದು ಉತ್ತಮ ಕಥೆ. ಮೇಲು ಕೀಳಿನ ಸಮಸ್ಯೆಯನ್ನು ಸಾಂದ್ರವಾಗಿ ಹಿಡಿಯುತ್ತದೆ. ತಲೆತಲಾಂತರದಿಂದ ಕಾಲ ಕಸವಾಗಿ ಬದುಕುತ್ತಿದ್ದ ಜನ ತಮ್ಮನ್ನು ತಾವೇ ಅಸರ್ಟ್ ಮಾಡಿಕೊಳ್ಳುವ ಬಗೆ ಚೇತೋಹಾರಿಯಾಗಿದೆ. ಕೆಳವರ್ಗದಲ್ಲಿ ಬಹು ಮಂದಿ ಹೇಳಿದ ಹಾಗೆ ಕೇಳಿಕೊಂಡಿರುವ ಮನಸ್ಸುಳ್ಳವರಾದರೂ ಅಲ್ಪಸ್ವಲ್ಪ ವಿದ್ಯಾಭ್ಯಾಸದಿಂದ ಆಧುನಿಕ ವಿಚಾರಗಳಿಂದ ಎಚ್ಚೆತ್ತ ಬೆರಳೆಣಿಕೆಯ ವ್ಯಕ್ತಿಗಳನ್ನು ರಾಮಣ್ಣ ಜೀವಂತವಾಗಿ ಮೂಡಿಸಿದ್ದಾರೆ. ಅವರ ಸ್ವಾಭಿಮಾನ, ಕೆಚ್ಚು, ಹಟ, ರೋಷ, ಶಕ್ತಿ, ಮುಂತಾದ ಗುಣಗಳು ಅವರ ಕತ್ತಲ ಬಾಳಿನ ಹಂದರದಲ್ಲಿ ಇಣುಕುವ ಕಿರಣಗಳಾಗಿವೆ. ಈ ಕತೆಯ ಸುಮಾನಿ ಅಂತಹ ಒಂದು ಪಾತ್ರ. ಅವನು ತನ್ನ ಜನಾಂಗದ ಹಕ್ಕುಗಳಿಗಾಗಿ ಹೋರಾಡಲು ಮುಂದಾದರೆ ಅವನ ಜನರೇ ಅವನಿಗೆ ಬೆಂಬಲ ನೀಡದ ಸಂಗತಿ ಮಾರ್ಮಿಕವಾಗಿದೆ. ಅವರನ್ನು ಪ್ರತಿನಿಧಿಸುವ ಎಂ.ಎಲ್.ಎ. ಕೂಡ ಸತ್ಯದ ಪರವಾಗಿರುವುದಕ್ಕೆ ಬದಲು ಮೇಲು ವರ್ಗದವರ ಜೊತೆ ಸೇರಿಕೊಳ್ಳುವುದು, ಪೋಲೀಸ್ ಇಲಾಖೆಯ ಸೋಗಲಾಡಿತನಗಳೆಲ್ಲ ಕತೆಯಲ್ಲಿ ಅನಾವರಣಗೊಳ್ಳುತ್ತವೆ.

ಜಾತಿವ್ಯವಸ್ಥೆಯ ಕೊಳಕುಗಳು, ಜನ ಬಾಯಿಬಿಟ್ಟರೆ ಸಾಕು, ಗಬ್ಬು ನಾರುತ್ತದೆ. ಸಮಸ್ಯೆಯ ಕಗ್ಗಂಟನ್ನು ಬಿಡಿಸುವುದಕ್ಕೆ ಬದಲಾಗಿ ಅದನ್ನು ಇನ್ನು ಸಂಕೀರ್ಣಗೊಳಿಸುವ ಜೀವನಗತಿ ಅದಮ್ಯವಾದುದು. ಇವೆಲ್ಲದರ ಮಧ್ಯೆಯೂ ತಾನು ಗುಟ್ಟಾಗಿ ಪ್ರೀತಿಸುವ ಹೆಣ್ಣನ್ನು ತನ್ನ ಆಳು ಮಗನಿಗೆ ಮದುವೆಮಾಡಿಕೊಂಡು ತಾನೇ ಅನುಭವಿಸಬೇಕೆಂದು ಕುದಿಯುತ್ತಿದ್ದ ಪಟೇಲನನ್ನು ಸುಮಾನಿ ಸೋಲಿಸುವ ರೀತಿ ಬಂಡೆದ್ದ ದಲಿತರ ಕೌಶಲಕ್ಕೆ ಸಾಕ್ಷಿಯಾಗಿದೆ. ಬಿಡುಗಡೆ ಹೊಂದುವ ವ್ಯಕ್ತಿಗಳು ಬೆಳೆಯುತ್ತವೆ. ಜೀವನ ತೀವ್ರತೆ ಬಿಡುಗಡೆಯ ಭಾವನೆಯನ್ನು ಪ್ರಚೋದಿಸುತ್ತದೆ."[15]

ಸುಮಾನಿಯ ತಂತ್ರಗಳೆಲ್ಲವನ್ನು ಪಟೇಲರ ಮುಂದೆ ಬೆತ್ತಲುಗೊಳಿಸುವ ಆಳು ಬುಗುರಿ, ಸುಮಾನಿಗೆ ದೊರಕದ ದಲಿತರ ಪೂರ್ಣ ಸಹಕಾರ, ಇವೆಲ್ಲವೂ ದಲಿತರಲ್ಲಿರುವ ಒಗ್ಗಟ್ಟಿನ ಕೊರತೆಯನ್ನು ಎತ್ತಿತೋರಿಸುತ್ತದೆ. ದಲಿತರನ್ನು ಸಮಾಜದ ಮುಖ್ಯ ವಾಹಿನಿಗೆ ತರಲೆಂದೆ ರೂಪಿಸಿರುವ ಮೀಸಲು ಕ್ಷೇತ್ರದಿಂದ ಆರಿಸಿಬಂದ ಎಂ.ಎಲ್.ಎ. ಮೇಲ್ವರ್ಗದ ಜೊತೆ ಶಾಮೀಲಾಗುವುದು ಭಾರತದ ಸಂವಿಧಾನದ ಸಮಾನತೆ, ಸ್ವಾತಂತ್ರ್ಯದ ಸಾಲುಗಳನ್ನು ಅಣಕಿಸಿದಂತಿದೆ. ಹೀಗೆ ಮೇಲ್ವರ್ಗದ ಕುತಂತ್ರಗಳಿಗೆ ದಲಿತರು ಕೂಡ ಬಾಗಿಯಾಗುವ ರೀತಿಯನ್ನು ರಾಮಣ್ಣನವರು ಸೂಕ್ಷ್ಮವಾಗಿ ತೆರೆದಿಟ್ಟಿದ್ದಾರೆ.

ಸ್ವಾತಂತ್ರ್ಯಾನಂತರ ಭಾರತ ಸರ್ಕಾರವು ಹಳ್ಳಿಗಳಲ್ಲಿರುವ ಬಡತನ, ಶೋಷಣೆಯನ್ನು ನಿರ್ಮೂಲನೆ ಮಾಡಲು ಹಲವಾರು ಕಾಯಿದೆಗಳನ್ನು ರೂಪಿಸಿರುವುದು ಸ್ವಾಗತಾರ್ಹವೇ ಸರಿ. ಆದರೆ ಸರ್ಕಾರದ ಸವಲತ್ತುಗಳು ಅರ್ಹ ಜನರಿಗೆ ಎಷ್ಟು ತಲುಪಿದವು ಎಂಬುದೇ ಪ್ರಶ್ನಾರ್ಹ. ಈ ನಿಟ್ಟಿನಲ್ಲಿ ರಾಮಣ್ಣನವರು ಚಿತ್ರಿಸುವ ಸುಣ್ಣದ ಹಳ್ಳಿಯ ಕತೆ ಭಾರತದ ಪ್ರತಿಯೊಂದು ಹಳ್ಳಿಯ ವಾಸ್ತವ ಸ್ಥಿತಿಯಾಗಿದೆ. "ಸುಣ್ಣದ ಹಳ್ಳಿಯ ಪ್ರಬಲ ಶಕ್ತಿಯಾದ ಗೋವಿಂದಸ್ವಾಮಿ ಇಡೀ ಹಳ್ಳಿಯನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಳ್ಳಲು ನಡೆಸುವ ಹುನ್ನಾರಗಳೆ

'ಚಲುವನ ಪರಂಗಿ ಗಿಡಗಳು' ಕತೆಯ ಒಳವಿನ್ಯಾಸವಾಗಿದೆ ಶೋಷಣೆ ಮತ್ತು ಕೌರ್ಯದ ಸಂಕೇತವಾಗಿರುವ ಗೋವಿಂದಸ್ವಾಮಿ ಸಾರ್ವಜನಿಕ ಹಿತಾಶಕ್ತಿಯ ಸರ್ಕಾರಿ ಸವಲತ್ತುಗಳನ್ನು ತಾನೇ ಬಳಸಿಕೊಳ್ಳುತ್ತಾನೆ. ರಾಜಕೀಯ ಹಿನ್ನೆಲೆಯ ಸವಲತ್ತುಗಳು ಅರ್ಹ ಜನಕ್ಕೆ ಮುಟ್ಟುತ್ತಿಲ್ಲ ಎಂಬುದು ಈ ಸಂದರ್ಭದಲ್ಲಿ ಗಮನಿಸಬೇಕಾದ ಅಂಶ. ಚಲುವನ ಆಶಯವನ್ನು ಅಂದರೆ ತನ್ನ ಅಸ್ತಿತ್ವವನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಸ್ವತಂತ್ರವಾಗುವುದನ್ನು ಗೋವಿಂದಸ್ವಾಮಿ ವಿರೋಧಿಸುತ್ತಾನೆ. ಈಗಾಗಲೇ ಈತ ಚಲುವನ ತಂದೆ ಮೂರೂರನನ್ನು ತನ್ನ ಜಮೀನಿನಿಂದ ಹೊರಕ್ಕೆ ಅಟ್ಟಿದ್ದಾನೆ. ಈ ಕಿಚ್ಚು ಹಸಿಯಾಗಿರುವಾಗಲೇ ಚಲುವನ ಸರದಿ ಬಂದಿದೆ. ಸಾರ್ವಜನಿಕವಾಗಿ ಗೋವಿಂದಸ್ವಾಮಿ ಪ್ರಗತಿಪರವಾಗಿ ಮಾತನಾಡುತ್ತ ವಾಸ್ತವದಲ್ಲಿ ಅದನ್ನು ವಿರೋಧಿಸುತ್ತಾನೆ."[16]

ಎಪ್ಪತ್ತರ ದಶಕದಲ್ಲಿ ರೂಪಿಸಲಾದ ಭೂಸುಧಾರಣ ಕಾಯಿದೆ ಬಡವರ ಬಾಳನ್ನು ಬೆಳಗುತ್ತದೆ ಎಂಬ ನಂಬಿಕೆ ಹುಸಿಯಾಯಿತು. ಮೂಗೂರನಂಥ ಮೂವತ್ತು ಬಡರೈತರು ಗೋವಿಂದಸ್ವಾಮಿಗೆ ಸೇರಿದ ಇಪ್ಪತ್ತಾರು ಎಕರೆ ಗದ್ದೆಯನ್ನು ಗುತ್ತಿಗೆ ಮಾಡುತ್ತಿದ್ದರು. ಈ ಕಾಯಿದೆಯಿಂದಾಗಿ ಗೇಣೀದಾರರಲ್ಲಿ ಭೂಒಡೆಯರಾಗುವ ಆಸೆ ಚಿಗುರುತ್ತದಾದರೂ ಅದು ಬಹಳ ಕಾಲ ಉಳಿಯುವುದಿಲ್ಲ. ಗೋವಿಂದಸ್ವಾಮಿ ತನ್ನ ಕುತಂತ್ರದಿಂದ ಅವರು ಹಕ್ಕು ಚಲಾಯಿಸದಂತೆ ತಡೆಯಿಡಿಯುತ್ತಾನೆ. ಗೇಣಿದಾರರಿಗೆ ಭೂಮಿ ಇರಲಿ ಗೇಣಿಯೂ ದಕ್ಕುವುದಿಲ್ಲ. ಹುಲುಸಾಗಿ ಬೆಳೆದ ಬೆಳೆ ಗೋವಿಂದಸ್ವಾಮಿಯ ಮನೆಯನ್ನು ಸೇರುತ್ತದೆ. ಗೋವಿಂದಸ್ವಾಮಿಯ ಇಂಥ ಕೃತ್ಯಗಳಿಗೆ ಭೂಸುಧಾರಣೆ ಮಂಡಳಿಗಳು, ಪೋಲಿಸರು, ಸರ್ಕಾರಿ ಅಧಿಕಾರಿಗಳು ಸಹಾಯಕರಾಗಿ ನಿಲ್ಲುತ್ತಾರೆ. ಹೀಗಾಗಿ ಸರ್ಕಾರಿ ಸೌಲಭ್ಯಗಳು ಅರ್ಹಜನರಿಗೆ ತಲುಪಬೇಕಾದರೆ ಜನರು ವಿದ್ಯಾವಂತರಾಗಬೇಕು. ಎಚ್ಚೆತ್ತುಕೊಳ್ಳಬೇಕು ಎಂಬುದೇ ಲೇಖಕರ ಆಶಯವಾಗಿದೆ.

ಮೂಗೂರನ ಶೋಷಣೆಯ ನಂತರ ಚಲುವನ ಸರದಿ ಬರುತ್ತದೆ. ಇಡೀ ಕುಟುಂಬ ಬೆವರು ಸುರಿಸಿ ಬೆಳೆದ ಪರಂಗಿ ಫಸಲಿನ ಮೇಲೆ ಗೋವಿಂದಸ್ವಾಮಿಯ ಕಣ್ಣು ಬೀಳುತ್ತದೆ. ಶಾಲೆಯ ಸಮಾರಂಭದ ನೆಪವೊಡ್ಡಿ ಆಳುಗಳನ್ನು ಕಳುಹಿಸಿ ಪರಂಗಿ ಕಾಯಿಗಳನ್ನು ಕಿತ್ತುಕೊಂಡು ಬರಲು ಕಳುಹಿಸುತ್ತಾನೆ. ತನ್ನ ಅಪ್ಪಣೆಯಿಲ್ಲದೆ ತನ್ನ ತೋಟದ ಮೇಲೆ ನಡೆಯುತ್ತಿರುವ ಆಕ್ರಮಣವನ್ನು ಸಹಿಸದ ಮುಗೂರ ಅದನ್ನು ಉಗ್ರವಾಗಿ ಪ್ರತಿಭಟಿಸುತ್ತಾನೆ. ಮೂಗೂರನ ಪ್ರತಿಭಟನೆ ಕೃತಕ, ಅವಾಸ್ತವ ಎನ್ನಿಸಿದರೂ ಪರಂಗಿಕಾಯಿಗಳ ಹಿಂದೆ ಇರುವ ಇಡೀ ಕುಟುಂಬದ ಪರಿಶ್ರಮವನ್ನು ನೆನೆದಾಗ ಬಂಡಾಯ ಅನಿವಾರ್ಯವೆನ್ನಿಸುತ್ತದೆ. "ಮೂಗೂರನ ಪ್ರತಿಭಟನೆ ನ್ಯಾಯಯುತ ಮತ್ತು ಮಾನವೀಯವಾಗಿರುವುದರಿಂದ ಶೋಷಣೆಯ ಗುಂಪು ಹಿಂಜರಿಯುತ್ತದೆ. ವಿರೋಧವನ್ನೆ ಕಂಡರಿಯದಿದ್ದ ಗೋವಿಂದಸ್ವಾಮಿ, ಹಠಾತ್ತಾಗಿ ಮೂಗೂರನ ಮೂಲಕ ಸ್ಫೋಟಗೊಳ್ಳುತ್ತಿರುವ ಪ್ರತಿಭಟನೆ ಸಾಮಾಜಿಕ ಆಯಾಮ ಪಡೆಯುತ್ತಿರುವುದನ್ನು ಗಮನಿಸುತ್ತಾನೆ. ಶೋಷಣೆಯ ಇನ್ನೊಂದು ಸ್ವರೂಪವಾಗಿದ್ದ ಪೋಲೀಸು, ಗೋವಿಂದಸ್ವಾಮಿಯ ಕೃತ್ಯಕ್ಕೆ ಜನಬೆಂಬಲವಿಲ್ಲ ಎಂಬುದರ ಅರಿವಾಗುತ್ತಿದ್ದಂತೆಯೇ, ಜನತೆಯ ಪರವಾಗಬೇಕಾದ ಅನಿವಾರ್ಯತೆಯನ್ನು ಒಪ್ಪಿಕೊಳ್ಳುತ್ತಿದ್ದಾನೆ. ತಾನು ಕತ್ತರಿಸಿದ ಗಿಡಗಳಿಗೆ ಬದಲಾಗಿ ಹೊಸ ಸಸಿಗಳನ್ನು ತಂದು ನೆಡುವುದರ ಮೂಲಕ ಮೂಗೂರ ಗೋವಿಂದಸ್ವಾಮಿಯ ಶೋಷಣೆಯನ್ನು ಗೆಲ್ಲುತ್ತಿದ್ದೇನೆ ಎಂಬ ಅರಿವನ್ನು ಜಾಗೃತಗೊಳಿಸಿಕೊಳ್ಳುತ್ತಾನೆ. ಚಲುವನ ಆಶಯವು ಇಡೀ ಕುಟುಂಬದ ಆಶಯವಾಗುವುದು. ಅದರಿಂದ ಹಳ್ಳಿಯ ಆಶಯವಾಗಿ ಬೆಳವಣಿಗೆಯಾಗುತ್ತಿರುವ ಲಕ್ಷಣವನ್ನು ಕತೆ ಧ್ವನಿಸುತ್ತದೆ. ಈ ಜಾಗೃತಿಯು ಗೋವಿಂದಸ್ವಾಮಿ ತನ್ನ ಮಾರ್ಗವನ್ನು ತಿದ್ದುಕೊಳ್ಳಬೇಕೆಂಬ ಅನಿವಾರ್ಯತೆಯಲ್ಲಿ ಚಲನಶೀಲವಾಗುತ್ತದೆ. ಯಾವುದೇ ಶೋಷಿತ ಸ್ಥಿತಿಯ ಹಿಂದೆ ವ್ಯವಸ್ಥೆ ಇದೆ. ಅದು ತನ್ನ ಪರವಾದ ವ್ಯಕ್ತಿಗಳನ್ನು ಸೃಷ್ಟಿಸಿಕೊಳ್ಳುವುದರ ಮೂಲಕ ತನ್ನ ಅಸ್ತಿತ್ವವನ್ನು ಅಭಾದಿತಗೊಳಿಸಿಕೊಳ್ಳುತ್ತದೆ. ಇದನ್ನು ಶಾಸ್ವತವಾಗಿಸುವ ಹಿನ್ನಲೆಯಲ್ಲಿ ಸಮಾಜದಲ್ಲಿ ಅರಿವು ಉಂಟಾಗುವುದನ್ನು ತಿರಸ್ಕರಿಸುತ್ತದೆ. ಈಗಾಗಲೇ ಎಲ್ಲ ರೀತಿಯಲ್ಲೂ ಸ್ಥಾಪಿತವಾಗಿರುವ ಶಕ್ತಿಗಳು ಅಜ್ಞಾನ, ಬಡತನ

ಮುಂತಾದ ಸಮಸ್ಯೆಗಳನ್ನು ಪೋಷಿಸುತ್ತವೆ. ಗೋವಿಂದಸ್ವಾಮಿಯಂಥ ವ್ಯಕ್ತಿ ಸಮಾಜ ಚಲನೆಯ ಹಂತದಲ್ಲಿರುವುದನ್ನು ಗಮನಿಸಿ, ಸಾರ್ವಜನಿಕ ಮತ್ತು ವಯಕ್ತಿಕ ಸಂದರ್ಭಗಳಲ್ಲಿ ಬೇರೆ ಬೇರೆ ನಡವಳಿಕೆಗಳನ್ನು ರೂಢಿಸಿಕೊಳ್ಳುತ್ತಾನೆ. ಸಾಧ್ಯವಾದರೆ ಈತ ಬದಲಾಗುವ ಹಂತದಲ್ಲಿದ್ದಾನೆ. ಪರಿವರ್ತನೆ ಮಾನಸಿಕವಾದ್ದರಿಂದ, ಅರಿವಿನ ಮೂಲಕವೇ ಅದು ವ್ಯಕ್ತಿಯನ್ನು ಸ್ಪರ್ಶಿಸಬೇಕಾಗುತ್ತದೆ. ಬಾಗಿದ ಬೆನ್ನು ಸೆಟೆದು ನಿಂತರೆ ಮಾಲೀಕ ವರ್ಗ ಬೆಚ್ಚುತ್ತದೆ. ಮೂಗೂರ ಅಬ್ಬರಿಸಿದರೆ ಗೋವಿಂದಸ್ವಾಮಿಯ ತೊಳ್ಳೆ ನಡುಗುತ್ತದೆ. ಮಾತು ಕ್ರಿಯಾತ್ಮಕ ಸ್ವರೂಪ ಪಡೆಯುತ್ತಿರುವುದನ್ನು ಈ ಸಂದರ್ಭದಲ್ಲಿ ರಾಮಣ್ಣ ಗಮನಿಸುತ್ತಾರೆ."[13]

ಇಡೀ ಸುಣ್ಣದ ಹಳ್ಳಿಗೆ ಬೇಲಿಯಾದ ಗೋವಿಂದಸ್ವಾಮಿ ತಾನೇ ಎದ್ದು ಹೊಲ ಮೇಯುವ ಸಂಗತಿ ಮಾರ್ಮಿಕವಾಗಿದೆ. ಬಿ.ಡಿ.ಓ., ಎಂ.ಎಲ್.ಎ., ಪೋಲೀಸರು, ತಮ್ಮ ಕರ್ತವ್ಯವನ್ನು ನಿಷ್ಠೆಯಿಂದ ನಿರ್ವಹಿಸದಿರುವುದು ವ್ಯವಸ್ಥೆಯ ದುರಂತಕ್ಕೆ ಹಿಡಿದ ಕನ್ನಡಿಯಾಗಿದೆ. ಅಕ್ಷರಜ್ಞಾನ ದಲಿತ ಬದುಕಿಗೆ ಹೊಸ ಚೈತನ್ಯವನ್ನು ನೀಡಿದ್ದಂತು ಸತ್ಯ. ಮೂಗೂರನಿಂದ ಆಗದ ಕೆಲಸ ಚೆಲುವನಿಂದ ಸಾಧ್ಯವಾಗಿದೆ. ಮನೆಯ ಸುತ್ತಲಿನ ಬರಡು ನೆಲ ಹಸಿರಿನಿಂದ ಕಂಗೊಳಿಸುವಂತಾಗಿದೆ.

'ಬೆಟ್ಟದ ಮೇಲೊಂದು ಮನೆಯ ಮಾಡಿ' ಕಥೆಯಲ್ಲಿ ಬಡವರ ಕಷ್ಟ ಹಿಡಿಯಾಗಿ ಮೂಡಿ ಬಂದಿದೆ. ಅನ್ನವನ್ನು ಬೆಳೆದು ಅನ್ನಕ್ಕಾಗಿ ಪರದಾಡುವ ಉರುಗಯ್ಯನ ಕುಟುಂಬ ದೇಶದ ಕೋಟ್ಯಾಂತರ ಶ್ರಮಿಕರ ಪ್ರತಿನಿಧಿಯಾಗಿದೆ. ಉರುಗಯ್ಯನ ದೈನ್ಯಸ್ಥಿತಿಯನ್ನು ಲೆಕ್ಕಿಸದ ಹರಿಶ್ಚಂದ್ರಯ್ಯ, ತೆಂಗಪ್ಪ, ಬಡವರ ಪಾಲಿನ ರಣಹದ್ದುಗಳಾಗಿದ್ದಾರೆ. ಇಂಥ ಕ್ರೂರ ಪರಿಸ್ಥಿತಿಯ ಪ್ರತಿನಿಧಿಯಾದ ತೆಂಗಪ್ಪನ ತಲೆಯನ್ನು ಕತ್ತರಿಸುವ ಮೂಲಕ ಉರಗಯ್ಯ ಹೊಸದೊಂದು ಬದುಕಿಗೆ ನಾಂದಿಯಾಡುತ್ತಾನೆ.

"ವ್ಯವಸ್ಥೆಯಳಗೆ ಪ್ರವೇಶಿಸುವುದು ಎರಡು ರೀತಿಯಲ್ಲಿದೆ; ಸ್ಥಿತಿಯನ್ನು ಮಾತ್ರವೇ ಗಮನಿಸುವುದು; ಮತ್ತು ಸ್ಥಿತಿಯ ಜತೆಯಲ್ಲಿ ಸಾಧ್ಯತೆಯನ್ನು ಕಾಣಿಸುವುದು. ಸಾಂಸ್ಕೃತಿಕ ಸಂದರ್ಭದಲ್ಲಿ ಲೇಖಕ ಕೇವಲ ಸ್ಥಿತಿಯನ್ನು ಹೇಳುತ್ತಿದ್ದರೂ ಅದರೊಡಲಿನಲ್ಲಿ ಸಾಧ್ಯತೆಯ ಹೊಳಹುಗಳನ್ನು ಇರಿಸುತ್ತಾನೆ. ಅಂಥ ಸಂದರ್ಭದಲ್ಲಿ ಅದು ಅವ್ಯಕ್ತವಾಗಿರುತ್ತದೆ. ಆದರೆ ಈ ಬಗೆಯ ಸಿದ್ಧ ಸೂತ್ರಗಳು ಇಂದು ಬದಲಾಗುತ್ತಿವೆ. ಲೇಖಕ ಹೇಳಬೇಕಾದುದನ್ನು ನೇರವಾಗಿಯೇ ವ್ಯಕ್ತಪಡಿಸುತ್ತಾನೆ. ವರ್ತಮಾನದ ಬಗೆಗೆ ಮಾತನಾಡುವಂತೆ ಭವಿಷ್ಯಕ್ಕೂ ಪ್ರತಿಕ್ರಿಯಿಸುತ್ತಾನೆ. ಇಂಥ ಸಂದರ್ಭದಲ್ಲಿ ವ್ಯವಸ್ಥೆಯ ಅವಶೇಷಗಳೇ ಅವನ ದಾರಿ ದೀಪಗಳಾಗುತ್ತವೆ. ರಾಮಣ್ಣ ಈ ಅನುಕೂಲಗಳನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಸ್ಥಿತಿಯನ್ನು ಪರಿಚಯಮಾಡಿಕೊಡುವಾಗಲೇ ಅದು ಮಾನವೀಯವಾದುದಲ್ಲ ಎಂಬುದನ್ನು ಹೇಳುತ್ತಾರೆ. ಇದು ಕಲಾತ್ಮಕತೆಗೆ ಧಕ್ಕೆ ಎಂದು ಅನಿಸಿದರೂ, ಹೊಸ ತಲೆಮಾರಿನ ಉದ್ದೇಶ ಈ ಕ್ರಮವನ್ನು ಮುರಿಯುವುದೇ ಆಗಿರುವುದರಿಂದ, ರಾಮಣ್ಣ ಸ್ವೀಕರಿಸುವ ಸಾಹಿತ್ಯಿಕವಾದ ಮೊದಲ ಬಂಡಾಯ ಗಮನಿಸುವಂಥದ್ದಾಗಿದೆ. ಇಂದಿನ ತಲೆಮಾರಿನ ಸಾಹಿತ್ಯದ ಸ್ವರೂಪ ಇವರಲ್ಲಿ ಪ್ರಥಮ ಆದ್ಯತೆಯಲ್ಲಿ ಅಭಿವ್ಯಕ್ತವಾಗಿದೆ. ಆದ್ದರಿಂದ ಇವರ ಮೂಲಕ ಮುಂದಿನ ಹೆಜ್ಜೆ ಇಡಬೇಕಾಗಿದೆ. ಬಂಡಾಯ ಮನೋಧರ್ಮದ ಸಾಂಸ್ಕೃತಿಕ ಕೊಡುಗೆ ಕೂಡ ಇಲ್ಲಿಂದ ಶುರುವಾಗುತ್ತದೆ. ಬಂಡಾಯವನ್ನು ದೇವನೂರು ಮಹಾದೇವ ಶೀತವಾಗಿ ದಾಖಲಿಸಿದರೆ ರಾಮಣ್ಣ ಅದು ಸಿಡಿಯಬೇಕಾದ ಅನಿವಾರ್ಯತೆಯಲ್ಲಿ ದಾಖಲಿಸಿರುತ್ತಾರೆ. 'ಕೆಂಪುಹುಂಜ', 'ಗಾಂಧಿಸಂತಾನ', ಕತೆಗಳು ಖಚಿತವಾಗಿ ದೇವನೂರರ ಬರವಣಿಗೆಯಲ್ಲಿ ಇಣುಕಿ ನೋಡಿವೆ. ಇಂದಿನ ಬಂಡಾಯ ಬರಹಗಾರರು ರಾಮಣ್ಣನವರನ್ನು ಗಂಭೀರವಾಗಿ ಅಧ್ಯಯನ ಮಾಡಬೇಕೆಂದು ದೇವನೂರರ ಸಂದರ್ಭ ಸ್ಪಷ್ಟಪಡಿಸಿದೆ. 'ಕಕರನ ಯುಗಾದಿ', 'ಚೆಲುವನ ಪರಂಗಿ ಗಿಡಗಳು', 'ಗಾಂಧಿಸಂತಾನ', 'ಕೆಂಪುಹುಂಜ', ಬೆಟ್ಟದ

ಮೇಲೊಂದು ಮನೆಯ ಮಾಡಿ', ಕತೆಗಳ ಮುಂದಿನ ಬೆಳವಣಿಗೆಯನ್ನು ಕನ್ನಡ ಕಥಾಲೋಕ ಕಾಣಬೇಕಾಗಿದೆ."[18] ಎಂದು ಹೇಳುವ ಕೋದಂಡರಾಮ ಅವರ ಮಾತುಗಳು ರಾಮಣ್ಣನವರ ಕತೆಗಳ ಶ್ರೇಷ್ಠತೆಯನ್ನು ಅರ್ಥಪೂರ್ಣವಾಗಿ ಸೆರೆಹಿಡಿದಿವೆ.

**ಅಡಿಟಿಪ್ಪಣಿಗಳು:**

1. ಬೆಸಗರಹಳ್ಳಿ ರಾಮಣ್ಣ : ಕನ್ನಂಬಾಡಿ; ಮುನ್ನುಡಿ ಪುಟ : 21
2. ಅದೇ : ಮುನ್ನುಡಿ ಪುಟಸಂಖ್ಯೆ : 22
3. ಎನ್.ಕೆ. ಕೋದಂಡರಾಮ : ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ: ಪುಟ ಸಂಖ್ಯೆ : 351
4. ಬೆಸಗರಹಳ್ಳಿ ರಾಮಣ್ಣ : ಕನ್ನಂಬಾಡಿ; ಮುನ್ನುಡಿ ಪುಟ : 91
5. ಅದೇ : ಪುಟ : 92
6. ಅದೇ : ಪುಟ : 90
7. ಅದೇ : ಪುಟ : 117
8. ಅದೇ : ಪುಟ : 200
9. ಎನ್. ಕೆ. ಕೋದಂಡರಾಮ : ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ : ಪುಟ : 352
10. ಅದೇ : ಪುಟ : 353
11. ಅದೇ : ಪುಟ : 354
12. ಅದೇ : ಪುಟ : 351
13. ಬೆಸಗರಹಳ್ಳಿ ರಾಮಣ್ಣ : ಕನ್ನಂಬಾಡಿ; ಮುನ್ನುಡಿ ಪುಟ : 193
14. ಅದೇ : ಪುಟ : 197
15. ಅದೇ : ಪುಟ : 22
16. ಎನ್. ಕೆ. ಕೋದಂಡರಾಮ : ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ : ಪುಟ : 354
17. ಅದೇ : ಪುಟ : 355
18. ಅದೇ : ಪುಟ : 356

## 5. ಗ್ರಾಮೀಣ ಸಂಪ್ರದಾಯಗಳು

ಜನಪದ ಸಂಪ್ರದಾಯಗಳು ಜಾನಪದದ ಒಂದು ಬಹುಮುಖ್ಯ ಪ್ರಕಾರ. ಒಂದು ಜನಸಮೂಹದ ಸಂಸ್ಕಾರ ವಿಶೇಷದ ಭದ್ರಬುನಾದಿಯ ಮೇಲೆ ರೂಪುಗೊಂಡು ಪರಂಪರಾಗತವಾಗಿ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಆ ಸಮಾಜದಲ್ಲಿ ಮುಂದುವರಿಯುವ ವಿಶಿಷ್ಟ ಉಪಾಸನೆ ಪದ್ಧತಿಗಳೇ ಸಂಪ್ರದಾಯಗಳೆನಿಸುತ್ತವೆ. ಪರಂಪರೆಯಿಂದ ಬಂದ ಒಂದು ಗುಂಪಿನ ರೂಢಿ, ಪದ್ಧತಿ, ಆಚರಣೆಗಳ ಒಟ್ಟು ಮೊತ್ತವೇ ಸಂಪ್ರದಾಯ. ನಂಬಿಕೆಗಳೆ ಸಂಪ್ರದಾಯಗಳಿಗೆ ಮೂಲ. ವಿಧಿ ನಿಷೇದಗಳು ಆಚರಣೆಗಳು ಇದರಲ್ಲಿ ಬೆರೆತಿರುತ್ತವೆ. ಆಚರಣೆಗಳಂತೂ ಬೇರ್ಪಡಿಸಲು ಸಾಧ್ಯವಾಗದ ರೀತಿಯಲ್ಲಿ ಬೆಸೆದುಕೊಂಡಿರುತ್ತವೆ. ಜಾನಪದದ ಇತರ ರೂಪಗಳಂತೆ ಜನಪದ ಸಂಪ್ರದಾಯಗಳು ಕರ್ನಾಟಕದ ಎಲ್ಲ ಜಾತಿ ಜನಾಂಗಗಳಲ್ಲೂ ಸಾರ್ವತ್ರಿಕವಾಗಿ ಕಂಡು ಬಂದರೂ ಬೇರೆ ಬೇರೆ ಜಾತಿ ಸಮೂಹಗಳಲ್ಲಿ ರೂಢಿಯಲ್ಲಿರುವ ಸಂಪ್ರದಾಯಗಳಲ್ಲಿ ವ್ಯತ್ಯಾಸಗಳು ಗೋಚರವಾಗುತ್ತವೆ.

ಆಧುನಿಕ ಸಮಾಜಕ್ಕಿಂತ ಆದಿಮಾನವ ಸಮಾಜದಲ್ಲಿ, ನಾಗರಿಕ ಸಮೂಹಗಳಿಗಿಂತ ಬುಡಕಟ್ಟು ಜನರಲ್ಲಿ, ನಗರಗಳಿಗಿಂತ ಗ್ರಾಮಾಂತರ ಪ್ರದೇಶಗಳಲ್ಲಿ ಸಂಪ್ರದಾಯಗಳು ಪ್ರಬಲವಾಗಿರುತ್ತವೆ. ಸಂಪ್ರದಾಯಗಳಲ್ಲಿ ಮೂಢನಂಬಿಕೆ, ಕಂದಾಚಾರ, ಕುತಂತ್ರಗಳು ಅಡಗಿವೆಯಾದರೂ ಸಂಪ್ರದಾಯ ಮಾನವ ಜೀವನದ ಸರ್ವಕ್ಷೇತ್ರಗಳಲ್ಲಿಯೂ ವ್ಯಾಪಿಸಿಕೊಂಡಿದೆ. ಅದೇ ಜೀವನವನ್ನು ರೂಪಿಸುತ್ತದೆ. ಅದೇ ಸಂಸ್ಕೃತಿಯ ತಿರುಳೂ ಹೌದು. ಸಂಪ್ರದಾಯದ ಅಸ್ತಿತ್ವವಿಲ್ಲದೆ ವ್ಯಕ್ತಿಯ ಕ್ರಿಯೆ ಅಥವಾ ಅಲೋಚನೆಗಳು ರೂಪುಗೊಳ್ಳುವುದಿಲ್ಲ.

'ಮಂಡ್ಯಜಿಲ್ಲೆ ಜನಪದ ಸಾಹಿತ್ಯ ಸಂಸ್ಕೃತಿಗಳ ತವರಿನಂತಿದೆ. ಇಲ್ಲಿ ವ್ಯವಸಾಯಕ್ಕೆ ಸಂಬಂಧಿಸಿದ ಹಲವಾರು ಸಂಪ್ರದಾಯಗಳು ರೂಢಿಯಲ್ಲಿವೆ. ಅಲ್ಲದೆ ಮಂಡ್ಯಜಿಲ್ಲೆಯಾದ್ಯಂತ ಹಲವಾರು ಗ್ರಾಮದೇವತೆಗಳು ಕಾಣಸಿಗುತ್ತವೆ.

ಗ್ರಾಮದೇವತೆಗಳು ವಿಪುಲವಾಗಿರುವುದರಿಂದ ಅಲ್ಲಿ ಹಲವಾರು ಹಬ್ಬ, ಆಚರಣೆಗಳು ಚಾಲ್ತಿಯಲ್ಲಿವೆ. ಇಂಥ ಕೆಲವು ಹಬ್ಬ ಆಚರಣೆಗಳಲ್ಲಿ ಪ್ರಮುಖವಾದವುಗಳನ್ನು ರಾಮಣ್ಣನವರು ತಮ್ಮ ಕತೆಗಳ ಮೂಲಕ ಸೆರೆಹಿಡಿದಿದ್ದಾರೆ. ಈ ನಿಟ್ಟಿನಲ್ಲಿ 'ಶೂಲ', 'ಹರಕೆಯ ಹಣ', 'ಸುಗ್ಗಿ', 'ಬೇಲಾ', ಕತೆಗಳು ಪ್ರಮುಖವಾಗಿವೆ.



'ಮಕ್ಕಳನ್ನು ಮಾರಿ ಹಬ್ಬವನ್ನು ಮಾಡು' ಎಂಬ ಗಾದೆಯೇ ಗ್ರಾಮೀಣ ಬದುಕಿನಲ್ಲಿ ಹಬ್ಬಗಳಿಗೆ ಇರುವ ಮಹತ್ವದ ಸ್ಥಾನವನ್ನು ಎತ್ತಿ ತೋರುತ್ತದೆ. ಕೃಷಿ ಜೀವನದ ನೋವು, ದುಃಖಗಳನ್ನು ಮರೆತು ಹಬ್ಬದ ಆಚರಣೆಗಳಲ್ಲಿ ಪ್ರತಿಯೊಬ್ಬರೂ ಸಂತೋಷದಿಂದ ಪಾಲ್ಗೊಳ್ಳುತ್ತಾರೆ. ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ನಡೆಯುವ ಹಬ್ಬಗಳು ವಿಭಿನ್ನ ವಿಧಿ, ವಿಧಾನಗಳನ್ನು ಒಳಗೊಂಡಿದ್ದು ತಮ್ಮದೇ ಆದ ವೈಶಿಷ್ಟ್ಯವನ್ನು ಹೊಂದಿರುತ್ತವೆ. ಹಬ್ಬದ ದಿನ ಸಾಂಪ್ರದಾಯಿಕ ಆಚರಣೆಗಳಲ್ಲಿ ಜನಪದರು ತೋರುವ ಸಾಹಸ, ಧೈರ್ಯ, ದಂಗು ಬಡಿಸುತ್ತದೆ. 'ಶೂಲ' ಕತೆ ಮಂಡ್ಯ ಜಿಲ್ಲೆಯ ಅರಕೆರೆ ಗ್ರಾಮದಲ್ಲಿ ನಡೆಯುವ ವಿಶಿಷ್ಟ ಹಬ್ಬವೊಂದರ ಹಿನ್ನೆಲೆಯಲ್ಲಿ ರಚಿವಾದ ದುರಂತ ಪ್ರೇಮಕತೆಯಾಗಿದೆ. ಕತೆ, ಆರಂಭದಿಂದಲೇ ಜಯರಾಮು, ಗೌರಿಯ ಪ್ರೀತಿಗೆ ಇರುವ ಅಡೆತಡೆಗಳ ಚಿತ್ರಣವನ್ನು ನೀಡುತ್ತಲೇ ದುರಂತದ ಎಳೆಗಳನ್ನು ಬಿಚ್ಚುತ್ತ ಹೋಗುತ್ತದೆ. ಇದು ಗ್ರಾಮೀಣ ಬದುಕಿನಲ್ಲಿ ಪ್ರೀತಿ ಪ್ರೇಮಗಳಿಗೆ ಅಂಥ ಮನ್ನಣೆಯಿಲ್ಲ ಎಂಬ ಅಂಶವನ್ನು ಧ್ವನಿಸುತ್ತದೆ. ಇವರಿಬ್ಬರ ಪ್ರೀತಿಯೇ ಕಾರಣವಾಗಿ ಎರಡು ಮನೆತನಗಳ ನಡುವೆ ಧ್ವೇಷ ಭಾವನೆ ಮೊಳಕೆಯೊಡೆಯುತ್ತದೆ. ಜಯರಾಮು ವಿದ್ಯೆಯಲ್ಲಿ, ಆಸ್ತಿಯಲ್ಲಿ ಉನ್ನತ ಸ್ಥಾನದಲ್ಲಿದ್ದರೂ ಆತನ ವಂಶವೇ ಅವನ ಪ್ರೀತಿಗೆ ಮುಳುವಾಗುತ್ತದೆ. ಇದು ಗ್ರಾಮೀಣ ವಂಶಾವಳಿಗೆ ನೀಡುವ ಸ್ಥಾನಮಾನವನ್ನು ಎತ್ತಿ ತೋರುತ್ತದೆ.

"ಗೌರಿ, ನೀನು ಶೂಲದ ವಂಶದಲ್ಲಿ ಹುಟ್ಟಿದೋಳು, ನಾನು ಅಡ್ಡನಾಡಿ ವಂಶದವನು! ನಮ್ಮ ಸೋದರತ್ತೆ ಯಾರನ್ನೋ ಕರಕಂಡು ಕಣ್ಣಿಗೆ ಕಾಣಿಸದಂಗೆ

ಹೋರಟುಹೋದಳಂತೆ.......ಅಂತ ವಂಶ........"[1] ಜಯರಾಮು ಗೌರಿಗೆ ಹೇಳುವ ಈ ಮಾತುಗಳು ಹಳ್ಳಿಯ ಸಾಮಾಜಿಕ ಕಟ್ಟುಪಾಡುಗಳನ್ನು ಪರಿಚಯಿಸುತ್ತದೆ.

'ಶೂಲ' ಕತೆಯಲ್ಲಿ ಗಮನಿಸಬೇಕಾದ ಮತ್ತೊಂದು ಪ್ರಮುಖವಾದ ಅಂಶವೆಂದರೆ ಮಾಸ್ತಿಕಲ್ಲು. 'ಗಂಡ ಸತ್ತಾಗ ಅವನ ಜೊತೆಯಲ್ಲಿ ಅವನ ಪತ್ನಿಯು ಬೆಂಕಿಗೆ ಬಿದ್ದು ಬೂದಿ ಆಗುವುದರ ನೆನಪಿಗೆ ನೆಡುವ ಕಲ್ಲನ್ನು 'ಮಹಾಸತಿಕಲ್ಲು' ಎನ್ನಲಾಗುತ್ತದೆ. ಇಂದಿನ ಸ್ತ್ರೀವಾದದ ಹಿನ್ನಲೆಯಲ್ಲಿ ಇಂಥ ಸಂಪ್ರದಾಯಗಳು ಕ್ರೂರ ಆಚರಣೆಗಳಾಗಿ ಕಾಣಿಸಿದರೂ ಅದರ ಹಿಂದಿರುವ ಭಾವ ರಮ್ಯವಾದುದಾಗಿದೆ. ಪ್ರಾಚೀನ ಕಾಲದ ಮಹಿಳೆಯರ ಸ್ಥೈರ್ಯಕ್ಕೆ ಹಿಡಿದ ಕನ್ನಡಿಯಾಗಿದೆ. "ತುದಿಯಲ್ಲಿ ತಪಸ್ಸಿನ ಭಂಗಿಯಲ್ಲಿ ಕುಳಿತಿರುವ ಹೆಣ್ಣು-ಗಂಡಿನ ಚಿತ್ರ. ಸೂರ್ಯ-ಚಂದ್ರ. ಮಧ್ಯಭಾಗದಲ್ಲಿ ಹೆಂಗಸಿನ ಎತ್ತಿದ ತೋಳು. ಇದರ ಕೆಳಗಡೆ ಒಬ್ಬರ ಹೆಗಲ ಮೇಲೊಬ್ಬರು ಕೈ ಹಾಕಿಕೊಂಡು ನಿಂತಿರುವ ಗಂಡು-ಹೆಣ್ಣುಗಳು. ಗಂಡಿನ ಬಲಗೈಯಲ್ಲಿ ಎತ್ತಿ ಹಿಡಿದುಕೊಂಡಿರುವ ಕಠಾರಿ, ಹೆಣ್ಣಿನ ಎಡಗೈಯಲ್ಲಿ ಮಾದಲದ ಹಣ್ಣು. ಸಂತಸದಿಂದ ಗಂಡನೊಡನೆ ತನ್ನನ್ನೇ ಸುಟ್ಟುಕೊಂಡ ಆ ಮಾಹಾಪತಿವ್ರತೆಯ ಚಿತ್ರವನ್ನು ನೋಡಿ ಜಯರಾಮು ರೋಮಾಂಚನಗೊಂಡ. ಆ ಮಹಾಸತಿಯ ಬಲಗೈಯನ್ನು ಮುಟ್ಟಿನೋಡಿದ. ಇದೇ ಕಲ್ಲನ್ನು ತೋರಿಸಿ ಗೌರಿ ಹೇಳಿದ್ದ ಮಾತುಗಳನ್ನು ನೆನೆದು, ಮತ್ತೆ ಚಿತ್ರಗಳಿಗೆ ಜೀವ ಬಂದು, ಗಂಡು ತಾನಾಗಿ, ಹೆಣ್ಣು ಗೌರಿ ಆಗಿ ಒಬ್ಬರನ್ನೊಬ್ಬರು ಕೈ ಹಿಡಿದು ನಿಂತಿದ್ದಾರೆ! ಅಂದರೆ ಗೌರಿ ಚಿತೆ ಏರಲು ಸಿದ್ಧಳಾಗಿದ್ದಾಳೆ! ಜಯರಾಮು ಬೆಚ್ಚಿದ, ಗೌರಿ ಚಿತೆ ಏರಬೇಕಾದರೆ ತಾನು ಸಾಯಬೇಕು!"[2]

ಅರ್ಧನಾರೀಶ್ವರ ಕಲ್ಪನೆಯ ಭಾರತದಲ್ಲಿ ಇಂಥ ಸಂಪ್ರದಾಯಗಳು ಸಾಮಾನ್ಯವಾದವುಗಳಾಗಿವೆ. ಸೂರ್ಯ-ಚಂದ್ರರಿರುವ ತನಕ ಆ ಮಹಾಸತಿಯ ಕೀರ್ತಿ ಹಾಗೂ ಅವರಿಬ್ಬರ ಪ್ರೀತಿ ಬೆಳಗಲಿ ಎಂಬುದೇ ಮಹಾಸತಿ ಕಲ್ಲು ನೆಡುವ

ಉದ್ದೇಶವಾಗಿದೆ. ಪ್ರಸ್ತುತ ಕತೆಯಲ್ಲಿ ಇದು ಜಯರಾಮ–ಗೌರಿಯ ಪ್ರೇಮದ ದುರಂತವನ್ನು ಸಂಕೇತಿಸುತ್ತದೆ.

'ಶೂಲ'ದ ಹಬ್ಬದ ಆಚರಣೆಯ ವಿಧಿ ವಿಧಾನಗಳನ್ನು ರಾಮಣ್ಣನವರು ಸ್ಪಷ್ಟವಾಗಿ ವಿವರಿಸುತ್ತಾರೆ.

"ಹಿಂದೆ ವರ್ಷಕ್ಕೊಂದು ಸಾರಿ ತಪ್ಪದೆ ನಡೆಯುತ್ತಿದ್ದ ಶೂಲದ ಹಬ್ಬ, ಈಗ ಐದು ವರ್ಷಗಳು ಕಳೆದ ನಂತರ ಊರಿಗೆ ಊರೇ ಸಿದ್ಧತೆ ನಡೆಸುತ್ತಿದೆ. 'ಶೂಲದ ಹಬ್ಬ' ಉಳಿದ ಹಬ್ಬಗಳಂತೆ ಸದರವಾದ ಹಬ್ಬವಲ್ಲ. ಪ್ರಾಮುಖ್ಯತೆ ಮತ್ತ ಸಂಕೇತಗಳು ತೀರ ಈಚಿನ ಜನಕ್ಕೆ ಸ್ಪಷ್ಟವಾಗಿ ತಿಳಿಯದಿದ್ದರೂ ಮೊದಲಿನಷ್ಟೇ ಶ್ರದ್ಧೆಯಿಂದ ನಡೆಸಲು ಎಲ್ಲ ಯತ್ನಗಳೂ ನಡೆಯುತ್ತವೆ. ಹಬ್ಬ ಒಂದು ತಿಂಗಳು ಎನ್ನುವಂತೆ ಊರಿನಲ್ಲಿ ಮೆಣಸಿನಕಾಯಿ ಸುಡುವಂತಿಲ್ಲ, ಕುರಿ ಕುಯ್ದು ಮಾಂಸ ಪಾಲು ಹಾಕುವಂತಿಲ್ಲ. ಶೂಲದ ಬೋರೆಯಲ್ಲಿ ಒಂದು ಆಳುದ್ದದ ನಾಲ್ಕು ಗುಂಡಿಗಳನ್ನು ಕೀಳುವವರು ಮುಸಲ್ಮಾನರು! ಅರವತ್ತು ಅಡಿಗಳಷ್ಟು ಎತ್ತರವಿರುವ ನಾಲ್ಕು ಅಡಿಕೆ ಮರಗಳನ್ನು ಊರಿನ ನೂರಾರು ಬಲಿಷ್ಠ ಯುವಕರು ನೆಲಕ್ಕೆ ಬೀಳದಂತೆ ಕಡಿದು, ಮಾರಮ್ಮನ ಗುಡಿಗೆ ತಂದು ಪೂಜಿಸಿ, ಎಲ್ಲಿಯೂ ನೆಲಕ್ಕೆ ತಾಗದಂತೆ ಎಚ್ಚರಿಕೆಯಿಂದ ಶೂಲದ ಬೋರೆಗೆ ಸಾಗಿಸಿ ಮತ್ತೆ ಪೂಜೆಮಾಡಿ, ತುದಿಗೆ ಶೂಲ ಆಡುವವರು ನಿಂತುಕೊಳ್ಳಲು ಮಣೆ ಜೋಡಿಸಿ ನಂತರ ನೆಡುತ್ತಾರೆ.

ಶೂಲದ ಹಬ್ಬದ ದಿನ ಮಾರಮ್ಮನ ಪೂಜೆಯನ್ನು ಕೆರೆಯಿಂದ ಶೂಲದ ಬೋರೆಗೆ ಹುಮ್ಮಸ್ಸಿನಿಂದ ತಮಟೆಗಳ ಕಹಳೆಗಳ ಸದ್ದಿನ ನಡುವೆ, ಭಕ್ತರ ಕಾಕು ಕೇಕೆಗಳೊಡನೆ ತಂದು; ಅಲ್ಲಿಂದ ಪೂಜೆ ಮಾರಮ್ಮನ ಗುಡಿಗೆ ನಡೆದು ಅಲ್ಲಿ ಪೂಜೆ ನಡೆಯುತ್ತಿದ್ದಂತೆಯೇ ಶೂಲ ಆಡುವವರು, ಬಲಿ ಬೀಳುವವರು ಬರುತ್ತಾರೆ.

ಎಲ್ಲರೂ ತೀರ್ಥ ಹಾಕಿಸಿಕೊಂಡು ಬೋರೆಗೆ ಬರುತ್ತಾರೆ. ಬಲಿಯುವರು ಬಿದ್ದ ನಂತರ, ಶೂಲ ಆಡುವವರು ಮರಹತ್ತಿ ಆಡತೊಡಗುತ್ತಾರೆ. ಅಲ್ಲಿಂದ–ಇಲ್ಲಿಗೆ

ಬಳುಕುತ್ತ ಇನ್ನೇನು ನೆಲಕ್ಕೆ ಮಲಗಿಬಿಟ್ಟುವೆನೋ ಎನ್ನುವಂತೆ ತೂಗುವ ಮರಗಳನ್ನು ಆಡುವವರನ್ನು ಜನರು ಉಸಿರುಕಟ್ಟಿ ನೋಡುತ್ತ ನಿಂತುಬಿಡುತ್ತಾರೆ! ಒಮ್ಮೊಮ್ಮೆ ಹಿಂದಿನ ಕಾಲದಲ್ಲಿ ಶೂಲ ಆಡುವವರು ಪಕ್ಕದಲ್ಲಿರುವ ಮನೆಗಳ ಬೆನ್ನೆಂಚನ್ನು ಬಗ್ಗಿ ಎತ್ತಿಕೊಳ್ಳುತ್ತಿದ್ದುದೂ ಉಂಟಂತೆ!

ನಾಡಗೌಡರು ಕೊಟ್ಟ 'ಪೀಡಗಡವು' ಮರಿಯನ್ನು ಕಡಿದು ಮಾಲೆಮರ (ಮಧ್ಯದ ಶೂಲ ಆಡುವ ಮರ)ದ ಸುತ್ತ ಎಳೆದ ನಂತರ ಬಲಿಯವರನ್ನು ಎತ್ತುಕೊಂಡು, ಶೂಲದವರನ್ನು ಕರೆದುಕೊಂಡು ಮಾರವ್ವನ ಗುಡಿಗೆ ದೌಡಾಯಿಸುವ ಆ ದೃಶ್ಯ! ಅನಂತರ ಬಿಸಿರಕ್ತದ ಪ್ರಾಯದ ಹುಡುಗರು ಶೂಲದ ಮರಗಳನ್ನೇರಿ, ಒಬ್ಬರನ್ನೊಬ್ಬರು ಮೀರಿಸಿ ಶೂಲ ಆಡತೊಡಗುತ್ತಾರೆ. ಆಡುವಾಗ ಪ್ರಾಯದ ಹುಡುಗಿಯರು ಕಣ್ಣಿಗೆ ಬಿದ್ದು, ಅವರೇನಾದರೂ ಕಿರುನಗೆ ಬೀರಿದರೆ ತೀರಿತು. ನೋಡುವವರ ಎದೆ ನಡುಗುವಂತೆ ರಭಸದಿಂದ ಆಡತೋಡುಗುತ್ತಾರೆ. ಇಷ್ಟೆಲ್ಲ ನಡೆಯುತ್ತಿರುವಾಗ ಊರಿನ ಪ್ರಮುಖರನ್ನು ಅಶ್ಲೀಲವಾಗಿ ಆದರೆ ಕಾವ್ಯಶೈಲಿಯಲ್ಲಿ ಬೈಯ್ಯುವ 'ದಿಮ್ಮಿಸಾಲೆ'ಯ ಪಾತ್ರಧಾರಿನ ಎಲ್ಲ ಮುಗಿದ ನಂತರ ಶೂಲ ಆಡಿದವರಿಗೆ, ಶೂಲದ ಬೋರೆಯ ಸರಹದ್ದಿಗೆ ಅಂಟಿಕೊಂಡಿರುವ ಶೆಟ್ಟರ ಮನೆಯಲ್ಲಿ ಊಟ ಉಪಚಾರ. ಶೂಲದ ದಿನ ಈ ಶೆಟ್ಟರ ಮನೆಯಲ್ಲಿ ಎಳೆನೀರಿನಲ್ಲಿ ದೀಪ ಉರಿಯುವುದಂತೆ! ಹಬ್ಬ ಮುಗಿದ ಒಂದು ತಿಂಗಳ ನಂತರ ಮರಗಳನ್ನು ಪೂಜೆ ಮಾಡಿದ ನಂತರ ಹರಿಜನರು ಭಕ್ತಿಯಿಂದ ಕೀಳುತ್ತಾರೆ.

'ಶೂಲ' ಹಬ್ಬದ ಆಚರಣೆಯ ವಿದಿವಿಧಾನಗಳು ಹಾಗೂ ಅದರ ಮೂಲದ ಬಗೆಗೆ ಡಾ॥ ಚಿದಾನಂದ ಮೂರ್ತಿಗಳು ದೀರ್ಘವಾಗಿ ಚರ್ಚಿಸಿದ್ದಾರೆ. "ನಾನು ಇಷ್ಟು ಸಡಗರದ, ವೈಭವದ ಸ್ವಾರಸ್ಯದ ಜಟಿಲವೂ ಕುತೂಹಲಕರವೂ ದೀರ್ಘಾವಧಿಯದೂ ಆದ ಹಬ್ಬ ಮತ್ತೊಂದನ್ನು ನೋಡಿಲ್ಲ. ಆ ಸಡಗರ ವೈಭವ ಹಾಗಿರಲಿ, ಈ ಹಬ್ಬ ನಮ್ಮ ಮುಂದೆ ಅನೇಕ ಸಮಸ್ಯೆಗಳನ್ನು ಒಡ್ಡುತ್ತದೆ. 'ಶೂಲ' ಹಬ್ಬದ ಉಲ್ಲೇಖ ನಡುಗನ್ನಡ ಗ್ರಂಥಗಳಾದ ನಂಜುಂಡ ಕವಿಯ ಕುಮಾರ ರಾಮನ

ಸಾಂಗತ್ಯ, ಪಾಂಚಾಳಗಂಗನ ಚೆನ್ನರಾಮ ಸಾಂಗತ್ಯ, ಮಹಾಲಿಂಗ ಸ್ವಾಮಿಯ ಬಾಲರಾಮ ಸಾಂಗತ್ಯದಲ್ಲಿ ಕಂಡುಬರುತ್ತದೆ. ಈ ಹಬ್ಬವನ್ನು 'ಅರಕೆರೆ'ಯಲ್ಲಿ ಮಾತ್ರವಲ್ಲದೆ ಕರ್ನಾಟಕದ ಬೇರೆ ಬೇರೆ ಸ್ಥಳಗಳಲ್ಲಿಯೂ ಆಚರಿಸಲಾಗುತ್ತದೆ.

'ಶೂಲ'ದ ಹಬ್ಬಕ್ಕೂ ಶಿವಭಕ್ತರಾದ ಗುಂಡಯ್ಯ ಬ್ರಹ್ಮಯ್ಯರಿಗೂ ಸಂಬಂಧವನ್ನು ಕಲ್ಪಿಸುವ ಕತೆಯೊಂದು 'ಗುಂಡಬ್ರಹ್ಮಯ್ಯಚರಿತ್ರೆ' ಎಂಬ ತ್ರಿಪದಿಯಲ್ಲಿ ಕಂಡುಬರುತ್ತದೆ. ಓರಂಗಲ್ಲಿನ ಗಣಪತಿರಾಯರ ಬೊಕ್ಕಸದಲ್ಲಿ ಹಣವನ್ನು ಕದ್ದ ಇಬ್ಬರು ಚೋರರಿಗೆ (ಶಿವ ಮತ್ತು ನಾರದ ಅವರೇ ಈ ಚೋರರು ಎಂದು ಕತೆ ಹೇಳುತ್ತದೆ). ರಕ್ಷಣೆಯನ್ನು ಕೊಡುತ್ತಾರೆ. ಗುಂಡಯ್ಯ ಬ್ರಹ್ಮಯ್ಯ ಎಂಬ ಶಿವಶರಣರು ಕಳ್ಳರ ಪರವಾಗಿ ತಾವೇ ಶೂಲ ಏರಲು ಸಿದ್ದರಾಗುತ್ತಾರೆ. ರಾಜ ಶೂಲಗಳನ್ನು ಸಿದ್ಧಪಡಿಸಲು ಮಂತ್ರಿಗಳಿಗೆ ಆಜ್ಞೆ ಮಾಡುತ್ತಾನೆ.

ನುಡಿದ ಮಾತನು ಕೇಳಿ ಎಡಬಲದ ನೋಡಿಯೆ
ನೆಡಸಿದ ಶೂಲಗಳ ಬಿಗಿಸೆಂದು ಗಣಪತಿ
ಒಡನೆ ಮಂತ್ರಿಗಳ ಕಳುಹಿದ॥
ಬಂದ ಪ್ರಧಾನನು ನಂದನ ವನಕಾಗಿ ಶ್ರೀ
ಗಂಧದ ಮರವ ತರಿಸಿದನು ಮೇಲಕ್ಕೆ
ಚಂದ ಮಾಡಿದರು ಚೆನ್ನ ಹಲಗೆಯ॥
ಅಂದವಾದವು ಶೂಲ ಚಂದವಾದವು ಶೂಲ
ನಿಂದೆರಡು ಶೂಲ ಬೆಳವೂತ ಶರಣರು
ಬಂದರು ಶೂಲದ ಬಳಿಗಾಗಿ॥

ಶೂಲವನ್ನೇರಿದ ಆ ಇಬ್ಬರು ಭಕ್ತರ ಪತ್ನಿಯರು ತಮ್ಮ ತಲೆಗಳನ್ನು ಕತ್ತರಿಸಿಕೊಳ್ಳುತ್ತಾರೆ. ಈಗ ಗುಂಡ ಬ್ರಹ್ಮಯ್ಯರ ಸ್ಮರಣೆ ಬರದಿದ್ದರೂ ಮೂಲತಃ ಆ ಹಬ್ಬ ಅವರ ಸ್ಮಾರಕವಾಗಿಯೇ ನಡೆಯುತ್ತಿತ್ತೆಂದು ಹೇಳಲು ಆಧಾರಗಳಿವೆ. ಇಲ್ಲಿ ನೆಡುತ್ತಿರುವ ನಾಲ್ಕು ಶೂಲಗಳು ಗುಂಡಯ್ಯ, ಬ್ರಹ್ಮಯ್ಯ ಮತ್ತು ಅವರ

ಹೆಂಡತಿಯರು ಬಲಿಯಾದುದನ್ನು ಸಂಕೇತಿಸಬಹುದು. 'ಶೂಲ'ದ ಮೇಲೆ ಹತ್ತಿ ಆಡುವ ಮುನ್ನ, ನಾಲ್ವರು ಬಂದು ಶೂಲದ ಕೆಳಗೆ 'ಬಲಿ' ಬೀಳುವುದು ಆ ನಾಲ್ವರು ಭಕ್ತ ಭಕ್ತೆಯರ ಸಾವನ್ನು, ನಂತರ 'ಶೂಲ'ದ ಮೇಲೆ ಬಾಗುತ್ತ ಬಳುಕುತ್ತ ಆಟವಾಡುವುದು ಆ ನಾಲ್ವರು ಶಿವಭಕ್ತ ಭಕ್ತೆಯರು ಕೈಲಾಸಕ್ಕೆ ಹೋಗಿ ವಿಹರಿಸುತ್ತಿರುವುದನ್ನು ಸೂಚಿಸಬಹುದು. 'ಕರಕ್ಲ' ನಂತರ ಶೂಲ ಆಡುವವರೆಗೆ ಊರಲ್ಲಿ ಮಾಂಸಾಹಾರ ನಿಷಿದ್ಧವಾಗಿರುವುದು ಶಿವ ಸಂಪರ್ಕವನ್ನು ಸೂಚಿಸುತ್ತದೆ.

ಗುಂಡಯ್ಯ ಬ್ರಹ್ಮಯ್ಯರ ಸ್ಮಾರಕವಾದ ಶೂಲದ ಹಬ್ಬ ಅರಕೆರೆಯಲ್ಲಿ ತನ್ನ ಹಿಂದಿನ ಸಂಕೇತವನ್ನು ಕಳೆದುಕೊಂಡು ಮಾರಿಹಬ್ಬದ ಜೊತೆ ಸಮೀಕೃತವಾಗಿರುವಂತೆ ತೋರುತ್ತದೆ. ಎರಡು ಭಿನ್ನ ಸಂಪ್ರದಾಯಗಳಿಗೆ ಸೇರಿದ ಹಬ್ಬಗಳ ಸಮೀಕರಣಕ್ಕೆ ಇದೊಂದು ಒಳ್ಳೆಯ ಉದಾಹರಣೆ. ಮಾರಮ್ಮನ ಹಬ್ಬ ಕರ್ನಾಟಕದ ಬೇರೆ ಬೇರೆ ಜಾಗಗಳಲ್ಲಿ ಕೆಲವು ವ್ಯತ್ಯಾಸಗಳೊಂದಿಗೆ ನಡೆಯುತ್ತದೆ. ಅರಕೆರೆಯಲ್ಲಿ ನಡೆಯುವ ಮಾರಮ್ಮನ ಹಬ್ಬದ ಜೊತೆ ತೀರ ಬೇರೆಯಾದ, ಮೂಲತಃ ಶಿವ ಸಂಪ್ರದಾಯದ ಶೂಲದ ಹಬ್ಬ ಸಮಾವೇಶಗೊಂಡಿದೆ. ಇದು ಐತಿಹಾಸಿಕವಾಗಿ ನೋಡಿದಾಗ ಅನ್ನಿಸಬಹುದಾದ್ದು, ಆದರೆ ಈ ಹೊತ್ತಿನ ಶೂಲದ ಹಬ್ಬ ಅನೇಕ ಸ್ವಾರಸ್ಯದ ಸಂಗತಿಗಳನ್ನು ಒಳಗೊಂಡಿದೆ. ಉದಾಹರಣೆಗೆ, ಎಲ್ಲ ಕಡೆ ಪ್ರಚಲಿತವಿರುವಂತೆ, ಹಬ್ಬದಲ್ಲಿ ಬಲಿಯಾಗುವ ಕೋಣ ಮಾರಮ್ಮನ ಗಂಡನ ಸಂಕೇತವಾಗಿದೆ, ಆದರೆ ಅರಕೆರೆಯ ಮಾರಮ್ಮನ ಗಂಡ 'ದಿಮ್ಸಾಲೆ' ಬದುಕಿರುತ್ತಾರೆ ಮಾತ್ರವಲ್ಲದೆ ಅವನು ಸದಾ ಮಾರಮ್ಮನ ಸಹಚಾರಿಯಾಗಿರುತ್ತಾನೆ. ಈ ಬಗ್ಗೆ ಇನ್ನೂ ಹೆಚ್ಚಿನ ಸಂಗತಿಗಳನ್ನು ಕಲೆ ಹಾಕುವ ಅಗತ್ಯವಿದೆ.

'ಕರಕ್ಲ' ಆದ ಮೇಲೆ 'ದಿಮ್ಸಾಲೆ'ಯ ಕೆಲಸ ಆರಂಭವಾಗುತ್ತದೆ. ಶೂಲದ ಬೋರೆಯಲ್ಲಿನ ಒಣಹುಲ್ಲು ಸೌದೆ ರಾಶಿಗೆ ಅವನೇ ತನ್ನ ವೇಶದಲ್ಲಿ ಬಂದು ಬೆಂಕಿ ಇಡುತ್ತಾನೆ. ಅದರ 'ಬೂದಿ ಪ್ರಸಾದ'ವನ್ನು ಅದೇ ಊರಿನ ಮಂಚಮ್ಮ

ಮಾಸ್ತ್ಯಮ್ಮನ ಗುಡಿಗಳಿಗೂ ಸುತ್ತಮುತ್ತಲ ಹಳ್ಳಿಯ ದೇವಾಲಯಗಳಿಗೂ ಕೊಟ್ಟು ಬರಬೇಕಾದ 'ಬಿರುದು' ಅವನದು. 'ಕರಕ್ಲ' ಆದಮೇಲೆ ಮಾರನೆಯ ದಿನ 'ಪೀಡುಗಡೆ'ಯವವನ್ನು ದಿಮ್ಸಾಲೆಯೇ ಮರಿ ಕೊಯ್ದು ರಕ್ತವನ್ನು ಅನ್ನಕ್ಕೆ ಕಲಸಿ ಅದನ್ನು ಬೀದಿ ಬೀದಿಗಳಲ್ಲಿ ಎರಚುತ್ತಾನೆ. ಕರಕ್ಲ ಆದ ಮಂಗಳವಾರದಿಂದ ಮುಂದಿನ ಮಂಗಳವಾರದವರೆಗೆ ಅವನಿಗೆ ಬಿಡುವು. ಆ ಒಂದು ವಾರ ಸುತ್ತ ಇರುವ ಮೂವತ್ತು ಮೂರು ಗ್ರಾಮಗಳಿಗೆ 'ವೇಷ' ಕಟ್ಟಿಕೊಂಡು ಹೋಗುತ್ತಾನೆ. ಕಾವಿ ಬಟ್ಟೆ ಧರಿಸಿ ಹೊಂಬಾಳೆ ಟೋಪಿ ತಲೆಗೆ ಇಟ್ಟು ಕೊರಳಲ್ಲಿ ಅಡಕೆಕಾಯಿ ಸರ ಹಾಕಿರುತ್ತಾನೆ. ನಡುವಿಗೆ ಇಳಿ ಬಿದ್ದಂತೆ ಒಂದು ಮರದ ಶಿಶ್ನವನ್ನು ಕಟ್ಟಿರುತ್ತಾರೆ. ಆ ದಿನಗಳಲ್ಲಿ ಬೆಳಗಿನಿಂದ ಸಂಜೆವರೆಗೆ ಅನ್ನ ಅಹಾರ ಇಲ್ಲ. ನೀರು ಕುಡಿಯುವಂತಿಲ್ಲ. ಉಚ್ಚೆ ಹೊಯ್ಯುವಂತಿಲ್ಲ ಕೆಳಗೆ ಕುಳಿತುಕೊಳ್ಳುವಂತಿಲ್ಲ. ಸಂಜೆ ಗ್ರಾಮಗಳಿಂದ ಹಿಂದಕ್ಕೆ ಬಂದ ಮೇಲೆ ಊಟ ಮಾಡಬಹುದು. ಅವನು ಹಳ್ಳಿಗಳಲ್ಲಿ ಹೋಗುವಾಗ ಅವನ ಜೊತೆ ಹಾಡಲು 'ದಿಮ್ಸಾಲೆ ಗುಡ್ಡ'ನನ್ನು ಕರೆದೊಯ್ಯುತ್ತಾನೆ. ಈ ಗುಡ್ಡನೂ ಗಂಗಾಮತಸ್ಥನೇ, ಇವರ ಜೊತೆ ನಾಲ್ಕು ಜನ 'ಚಕ್ಕರ್ರು' ತಮ್ಮಟೆ ಬಡಿಯಲು ಬರುತ್ತಾರೆ. ಅವರು ಆಯಾ ಊರಿನ ಮನೆಮನೆಗೆ ಹೋಗಿ 'ಪಡಿ ಅಕ್ಕಿ' ಸಂಗ್ರಹಮಾಡಿಕೊಂಡು ಬರುತ್ತಾರೆ. ದಿಮ್ಸಾಲೆ ಹೋಗುವುದಿಲ್ಲ. ಅವನು ಒಂದು ಊರಿಗೆ ಹೋದ ತಕ್ಷಣ ಅವನಿಗೆ ಅಲ್ಲಿಯ ದೇವಾಲಯದ ಬಾಗಿಲು ತೆಗೆದು ಕೊಡುತ್ತಾರೆ. ಕರಕ್ಲ ಪ್ರಸಾದವನ್ನು ಇಟ್ಟು, ಹೊರಗಡೆ ಬಂದು ಸುತ್ತ ಸೇರುತ್ತಾರೆ. ಅವನು ಹಾಡುಗಳ ಮೂಲಕ 'ಬೋಗಳ' ಬೈಯ್ಯುತ್ತಾನೆ. ಅವನು ಸುಮ್ಮನಿದ್ದರೂ 'ಯಮಹಿಂಸೆ' ಮಾಡಿ ಬೈಯಿ ಬೈಯಿ ಎಂದು ಒತ್ತಾಯ ಮಾಡುತ್ತಾರೆ. ಅವನು ಹಾಡುವ ಹಾಡುಗಳಲ್ಲಿ ಮಾರಮ್ಮನ ವರ್ಣನೆ ಏನೂ ಇರುವಂತೆ ಕಾಣುವುದಿಲ್ಲ. ಲೈಂಗಿಕ ಜೀವನದ ಚಿತ್ರಗಳೇ ತುಂಬಿರುವ ಆ ಹಾಡುಗಳಲ್ಲಿ ಆ ಊರಿನ ಗಂಡಸರ, ಹೆಂಗಸರ ಹೆಸರುಗಳು ವಿಶೇಷವಾಗಿ ಬಳಕೆಯಾಗುತ್ತವೆ. ಹಿಂದೆ ಧಾರಾಳವಾಗಿ ಬೈಯ್ಯುತ್ತಿದ್ದ ಅವನಿಗೆ,

ಈಚೆಗೆ ನಾಗರೀಕತೆ ಪ್ರಭಾವ ಬೀರಿದೆ. ಅವನು ನಡುವಿಗೆ ಕಟ್ಟಿರುವ ಮರದ ಶಿಶ್ನಕ್ಕೆ ಅರಕೆರೆಯವರು ಬೆಳ್ಳಿ ಕಟ್ಟು ಮಾಡಿಸಿದ್ದಾರೆ.”.[4]

ಅರಕೆರೆ ಗ್ರಾಮದ ಶೂಲದ ಹಬ್ಬ ಯಾವುದೇ ಒಂದು ಜಾತಿಯ ಆಚರಣೆ ಅಲ್ಲ. ಅಲ್ಲಿ ಸಮಾಜದ ಎಲ್ಲ ಜಾತಿಯವರು ಪಾಲ್ಗೊಳ್ಳುತ್ತಾರೆ. ಹಿಂದೂ ಜಾತಿ ವ್ಯವಸ್ಥೆಯ ಜಾತಿಗಳು ಮಾತ್ರವಲ್ಲದೆ, ಸಾಬರು ಕೂಡ ಸಕ್ರಿಯವಾಗಿ ಭಾಗವಹಿಸುವುದು ಇಲ್ಲಿ ಮುಖ್ಯ. ಅಂದರೆ ಹಿಂದು ಸಮುದಾಯದ ಕೇರಿಗಳಿಗೆ ಮನೆಗಳಿಗೆ ಸೀಮಿತಗೊಂಡ ಶಿಷ್ಟ ಹಬ್ಬಗಳೇ ಅಧಿಕ. ಆದರೆ ಇಡೀ ಆಚರಣೆಯಲ್ಲಿ, ಇಡೀ ಸಮುದಾಯ ಮಿಳಿತವಾಗಿ ಪಾಲು ಪಡೆದು ಭಾಗವಹಿಸುವುದು ಇಲ್ಲಿ ಮುಖ್ಯವಾಗುತ್ತದೆ. ಆದರೆ ಸಮುದಾಯ ಸಂಸ್ಕೃತಿ ವಿಕಾಸದ ಹಂತದಲ್ಲಿ ಊಳಿಗಮಾನ್ಯ ವ್ಯವಸ್ಥೆಯ ಹಿಡಿತಕ್ಕೆ ಸಿಕ್ಕಿದಾಗ ಮೇಲ್ಜಾತಿಯವರ ಯಜಮಾನಿಕೆ ಪ್ರತಿಷ್ಠಾಪಿತವಾಗುವುದು ಎಂಬ ಸತ್ಯವನ್ನು ಈಗ ಅರಕೆರೆಯಲ್ಲಿ ನಡೆಯುತ್ತಿರುವ ಶೂಲದ ಹಬ್ಬ ಪ್ರತಿಪಾದಿಸುತ್ತದೆ.

“ಪಟ್ಟಣಿಗರಿಗೆ ಹಬ್ಬಗಳು ಮಾಡಬೇಕಾದ ಒಂದು ವಿಧಿ ಮಾತ್ರ. ಪಟ್ಟಣಗಳಲ್ಲಿ ಹಬ್ಬಗಳು ಹೂತು ಹೋಗಿರುತ್ತವೆ. ಅಥವಾ ಅವು ಅವರ ಜೀವನದಲ್ಲಿ ಎದ್ದು ಕಾಣುವುದಿಲ್ಲ. ಯಾವಾಗಬೇಕೆಂದರೆ ಆಗ ಹೊಸ ಬಟ್ಟೆ, ವಿಶೇಷ ಅಡುಗೆ, ಬಂಧುಗಳ ಮಿಲನ, ಲವಲವಿಕೆ, ಮನರಂಜನೆಯ ಅವಕಾಶಗಳಿಲ್ಲದಿರುವ ಹಳ್ಳಿಗರು ಹಬ್ಬಗಳನ್ನು ವಿಶೇಷವಾಗಿ ಪರಿಗಣಿಸುವುದನ್ನು ಅರ್ಥ ಮಾಡಿಕೊಳ್ಳಬಹುದು. ಅರಕೆರೆಯು ನಾಗರೀಕತೆಯ ಕಕ್ಷೆಗೆ ಸೇರಿರುವ ಗ್ರಾಮವಾದರೂ ಹಬ್ಬದ ಸಂಭ್ರಮವನ್ನು ತೀವ್ರ ರೀತಿಯಲ್ಲಿ ಪ್ರಕಟಪಡಿಸುತ್ತದೆ. ಇಡೀ ಹಳ್ಳಿ ಎರಡು ಮೂರು ದಿನ ಚೈತನ್ಯದಿಂದ ತುಂಬಿ ತುಳುಕಿತು. ಅದರ ಮುಖದ ಮೇಲೆ ಹಿಗ್ಗಿನ ಚಂದ್ರ ಕಳೆಯಿತ್ತು. ಅದೇ ಊರಿನ ಸಮೀಪದಲ್ಲಿ, ಕಾವೇರಿ ನದಿಯ ಇನ್ನೊಂದು ದಡದ ಮೇಲೆ ಇದ್ದ ಗ್ರಾಮವೊಂದರಲ್ಲಿ ಅರಕೆರೆಯ ಶೂಲದ ಹಬ್ಬಕ್ಕೆ ಎರಡು ದಿನ ಮುಂಚಿತವಾಗಿ ಇನ್ನೊಂದು ಶೂಲದ ಹಬ್ಬ

ನಡೆಯಬೇಕಿತ್ತು, ಅಲ್ಲಿ ಎಲ್ಲ ಸಿದ್ಧತೆಗಳಾಗಿ ಬಂಧುಗಳೂ ಊರಿಗೆ ಬಂದಿದ್ದರು. ಒಳಜಗಳಗಳಿಂದಾಗಿ ಆ ಊರಲ್ಲಿ ಹಬ್ಬ ಕೊನೆಯ ಗಳಿಗೆಗೆ ನಿಂತು ಹೋಯಿತು. ಅರಳಲಿದ್ದ ಹೂವೊಂದನ್ನು ಹೊಸಕಿ ಹಾಕಿದಂತಿತ್ತು ಆ ಊರು ಹಬ್ಬಗಳು ಹಳ್ಳಿಯ ಜನಜೀವನದಲ್ಲಿ ಎಂತಹ ಪ್ರಮುಖ ಪಾತ್ರವನ್ನು ವಹಿಸುತ್ತವೆ ಎಂಬುದಕ್ಕೆ ಆ ಎರಡು ಊರುಗಳೂ ಹಬ್ಬವನ್ನು ಆಚರಿಸಿ ಮತ್ತು ಆಚರಿಸಲಿದ್ದ ಹಬ್ಬವನ್ನು ನಿಲ್ಲಿಸಿ ಎರಡು ಬಗೆಯ ಉದಾಹರಣೆಗಳನ್ನು ಒದಗಿಸಿದವು"[5] ಎಂದು ಹೇಳುವ ಚಿದಾನಂದಮೂರ್ತಿಯವರ ಅನುಭವದ ಮಾತುಗಳು ಅರ್ಥಪೂರ್ಣವಾಗಿವೆ.

ಹಳ್ಳಿಗಳಲ್ಲಿ ವಿಚಿತ್ರವಾದ ಸಂಪ್ರದಾಯಗಳು ರೂಢಿಯಲ್ಲಿರುತ್ತವೆ. ಸಾಮಾಜಿಕವಾಗಿ ಜಾತೀಯತೆ ಪ್ರಬಲವಾಗಿ ಬೇರೂರಿದ್ದರೂ ಕೆಲವು ಆಚರಣೆಗಳಲ್ಲಿ ಜಾತ್ಯಾತೀತ ನಿಲುವು ಇಣುಕುತ್ತದೆ. 'ಶೂಲ' ಹಬ್ಬದಲ್ಲಿ ಗುಂಡಿ ತೆಗೆಯುವವರು ಮುಸ್ಲಿಮರಾದರೆ, ಮರಗಳನ್ನು ಕೀಳುವವರು ಹರಿಜನರು. ಹೀಗೆ ಗ್ರಾಮದ ಆಚರಣೆಯಲ್ಲಿ ಎಲ್ಲ ಜನಾಂಗದವರು ಸಾಮೂಹಿಕವಾಗಿ ಪಾಲ್ಗೊಂಡು ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಾರೆ. 'ಹರಕೆಯ ಹಣ' ಕತೆಯಲ್ಲಿ ಕ್ರಾಂತಿಕಾರಕ ಎನ್ನಬಹುದಾದಂತಹ ಸಂಪ್ರದಾಯವೊಂದನ್ನು ರಾಮಣ್ಣನವರು ಪರಿಚಯಿಸುತ್ತಾರೆ.

"ಮಲ್ಲನಾಯಕನಹಳ್ಳಿಯಲ್ಲಿ ಮೂರು ಹೆಣ್ಣು ದೇವರುಗಳು! ಮೂರು ಹೆಣ್ಣು ದೇವರುಗಳೇ ಅವು ದಂಡಿಗನಮ್ಮ, ಮಾಸ್ತಮ್ಮ, ಹುಚ್ಚಮ್ಮ ಉರುಫ್ ಮಾರಮ್ಮ. ಚಂಡಿಗನಮ್ಮ ಒಕ್ಕಲಗೇರಿಯಲ್ಲಿ ತಳ ಊರಿದ್ದರೆ, ಮಾಸ್ತಮ್ಮ, ಹುಚ್ಚಮ್ಮ ಉರುಫ್ ಹರಿಜನರ ಕೇರಿಯಲ್ಲಿ ತಳವೂರಿದೆ. ಮಲ್ಲನಾಯಕನಹಳ್ಳಿ ಒಂದು ಯಕಶ್ಚಿತ್ ಹಳ್ಳಿ. ಆದರೂ ಈ ದೇವರುಗಳ ಪೂಜೆಯ ಅಂಗದಲ್ಲಿರುವ ಒಂದು ವಿಚಿತ್ರವೋ ಅಥವಾ ಕ್ರಾಂತಿಕಾರಕವೋ ಎನ್ನಬಹುದಾದ ಸಂಪ್ರದಾಯದಿಂದ ಎಲ್ಲರ ಕಣ್ಣಿಗೆ ಬೀಳುವಂಥಾದದ್ದು. ಇಲ್ಲಿ ಎಲ್ಲ ಮೂರು ದೇವರುಗಳಿಗೂ ಗುಡ್ಡರು ಹರಿಜನರೇ! ಪೂಜೆ ಮಾಡುವವರು, ತೀರ್ಥಕೊಡುವವರು ಮೂರುವರ್ಷಕ್ಕೊಂದು ಸಲ ಆಗುವ

ದೊಡ್ಡ ಜಾತ್ರೆ ಕಾಲದಲ್ಲಿ ಪೂಜೆ ಹೊತ್ತು ಮೆರೆಸುವವರು, ಕೊಂಡ ಹಾಯುವವರು ಎಲ್ಲ ಹರಿಜನರೇ!"[6]

ಇಂದಿನ ವೈಚಾರಿಕ ಯುಗದಲ್ಲಿ ಹರಿಜನರನ್ನು ದೇವಸ್ಥಾನಗಳಿಗೆ ಪ್ರವೇಶಿಸದಂತೆ ನಿರ್ಬಂಧಿಸಿರುವಾಗ ಹಳ್ಳಿಯ ಇಂಥ ಆಚರಣೆಗಳು ಸಾಮಾನ್ಯವಾಗಿ ಕುತೂಹಲವನ್ನು ಇಮ್ಮಡಿಗೊಳಿಸುತ್ತವೆ. ಮನುಷ್ಯ ಸೃಷ್ಟಿಯ ಆರಂಭದ ದಿನಗಳಲ್ಲಿ ಜಾತಿ ಮತ ಮೇಲು ಕೀಳು ಭಾವನೆಗಳಿರಲಿಲ್ಲ. ಎಲ್ಲರೂ ಒಟ್ಟಿಗೆ ಜೀವಿಸುತ್ತಿದ್ದರು ಒಟ್ಟಿಗೆ ದೇವರನ್ನು ಪೂಜಿಸುತ್ತಿದ್ದರು. ಕಸುಬಿಗೊಂದು ಜಾತಿಯತೆ ಜಾತಿಗಳು ಹುಟ್ಟಿಕೊಂಡಾಗ ದೇವತೆಗಳೂ ಹೆಚ್ಚಾದವು. ಪರಿಣಾಮವಾಗಿ ಒಂದೇ ದೇವರನ್ನು ಅದೇ ಹೆಸರು ಅಥವಾ ಬೇರೆ ಬೇರೆ ಹೆಸರಿನಲ್ಲಿ ಹಲವು ಸ್ಥಳಗಳಲ್ಲಿ ಪೂಜಿಸುವುದು ರೂಢಿಗೆ ಬಂದಿತು. ಉದಾಹರಣೆಗೆ ಶಿವನಿಗೆ ಸಂಬಂಧಿಸಿದ ದೇವರನ್ನು ಒಟ್ಟಿಗೆ ಪೂಜಿಸುತ್ತಿದ್ದವರು ಕ್ರಮೇಣ ಬೇರೆ ಬೇರೆ ಕಡೆಗಳಲ್ಲಿ ಪೂಜಿಸುವಂತಾಯಿತು. ಲಿಂಗಾಯಿತರು, ಒಕ್ಕಲಿಗರು, ಹರಿಜನರು ಬೇರೆ ಬೇರೆಯಾಗಿ ಶಿವನನ್ನು ಅಥವಾ ಶಿವನಿಗೆ ಸಂಬಂಧಿಸಿದ ದೇವತೆಯನ್ನು ಪೂಜಿಸಿದರು. ಜಾತಿ ಸಮಾಜಗಳಿಗೆ ಅನುಗುಣವಾಗಿ ಆಯಾ ಜಾತಿಯ ದೇವತೆಗೆ ಅದರದೇ ಆದ ಕಟ್ಟುಪಾಡುಗಳು ಆರಂಭವಾಯಿತು. ಜನರ ಮನೋಧರ್ಮದಂತೆ ದೇವತೆಯ ಸ್ಥಾನಮಾನವೂ ವ್ಯತ್ಯಾಸವಾಯಿತು. ಜಾತಿಗಳು ದೈವಗಳ ಮೇಲೆ ಅಥವಾ ದೈವ ಜಾತಿಗಳ ಮೇಲೆ ಪ್ರಭಾವ ಬೀರುವುದು ಸಾಮಾನ್ಯವಾಯಿತು. ಸಾಮಾಜಿಕವಾಗಿ, ಆರ್ಥಿವಾಗಿ ಮುಂದುವರಿದವರ ದೇವರು ಹಿಂದುಳಿದವರ ದೇವರಿಗಿಂತ ಮೇಲು ಎಂದು ತಿಳಿಯುವುದು ಸಂಗತ ಎನಿಸಿತು. ಈ ಕಾರಣದಿಂದಾಗಿಯೇ ದಂಡಿಗಮ್ಮನಿಗಿರುವ ಕೆಲವು ಹಕ್ಕುಗಳು ಮಾಸ್ತಮ್ಮನಿಗಾಗಲಿ, ಹುಚ್ಚಮ್ಮನಿಗಾಗಲಿ ದೊರಕುವುದಿಲ್ಲ.

"ಇವಳಿಗೆ ಕೊಂಡದ ಹಕ್ಕು ಇಲ್ಲ. ದಂಡಿಗಮ್ಮನ ಕೊಂಡದಲ್ಲೇ ಅವಳ ಗುಡ್ಡನ ಹಿಂದೆ ಇವಳ ಗುಡ್ಡರೂ ಹಾಯಬೇಕು. ಆಮೇಲೆ ಪರದ ಊಟ

ಒಕ್ಕಲಿಗರಿಗೆ, ಇತರ ದೊಡ್ಡಜಾತಿಯವರಿಗೆಲ್ಲ, ದಂಡಿಗಮ್ಮನ ಗುಡಿಯ ಸುತ್ತಮುತ್ತ ಕೂರಿಸಿ ಉಣ್ಣುವುದಕ್ಕೆ ಇಕ್ಕಿದ ಮೇಲೆ ಹರಿಜನರಿಗೆ ಮಿಕ್ಕಿದ್ದು ಗಿಕ್ಕಿದ್ದು. ಒಮ್ಮೊಮ್ಮೆ ಏನು ಮಿಗದೆ ಪುನಃ ಅಕ್ಕಿ ಹಾಕಿ, ನೀರು ಸಾರು ಮರಳಿಸಿ ಇಕ್ಕಿದ ಕತೆಗಳೂ ನಡೆದಿವೆ. ಕಾರಣ ಬಾಡಿನ ಪರ ಎಂದರೆ ಹತ್ತಾರು ಮೈಲಿ ದೂರದಿಂದಲೇ ದಂಡಿಗಮ್ಮನ ಭಕ್ತವೃಂದ ವಾಸನೆ ಪತ್ತೆಹಚ್ಚಿ ರಾತ್ರಿ ಊಟಕ್ಕೆ ಮಧ್ಯಹ್ನದಿಂದಲೇ ಘೇರಾಯಿಸಿಬಿಡುವುದು. ದಂಡಿಗಮ್ಮನಿಗೆ ಬರೀ ಆಡು ಕುರಿಗಳನ್ನು ಬಲಿ ಕೊಟ್ಟರೆ ಅವಳ ಒಡಲಿಗೆ ತೃಪ್ತಿಯಿಲ್ಲ ನಾಲ್ಕಾರು ಕೊಬ್ಬಿದ ಸುಂಟಿಗೆ ಉಳ್ಳ ಹಂದಿಗಳೂ ಬೇಕೆ ಬೇಕು. ಹಂದಿ ಮಾಂಸವನ್ನು ಚೆನ್ನಾಗಿ ಉರಿದು ಪರದ ಊಟದ ಜೊತೆಯಲ್ಲಿ ಬಡಿಸುವುದು ಇನ್ನೊಂದು ವಿಶೇಷವಾದ್ದರಿಂದ ಭಕ್ತರ ನೂಕು ನುಗ್ಗಲು."[7]

ಗ್ರಾಮದೇವತೆಗಳಲ್ಲಿ ಹೆಚ್ಚಿನವು ಶಕ್ತಿದೇವತೆಗಳಾದ್ದರಿಂದ ಅವುಗಳಲ್ಲಿ ಉಗ್ರತೆ ಹೆಚ್ಚು. ಅಂತೆಯೇ ಅವು ಬಲಿ ಬೇಡುವುದು ಸಾಮಾನ್ಯ. ಆದಿಯಲ್ಲಿ ಮನುಷ್ಯ ಸಂಪೂರ್ಣ ಮಾಂಸಾಹಾರಿಯಾಗಿದ್ದ ಬೇಸಾಯ ತಿಳಿದಿರದಿದ್ದ ಕಾಲದಲ್ಲಿ ಅದು ಅನಿವಾರ್ಯವೂ ಆಗಿತ್ತು. ಫಲವಾಗಿ ಆತ ತಾನು ತಿನ್ನುವ ಆಹಾರವನ್ನೇ ಅರ್ಪಿಸುತ್ತಿದ್ದ. ಬಲಿಕೊಡುವುದರಿಂದ ಉಗ್ರದೇವತೆಯನ್ನು ಸುಲಭವಾಗಿ ಸಂಪ್ರೀತಗೊಳಿಸಬಹುದು ಎಂದು ನಂಬಿದ. ಅದಕ್ಕಾಗಿ ಅವನು ಯಾವ ಜೀವಿಯ ಬಲಿಕೊಡಲು ಹಿಂಜರಿಯುತ್ತಿರಲಿಲ್ಲ. ಸುಲಭವಾಗಿ ಹಿಡಿದು ಪಳಗಿಸಬಹುದಾದ ಕೋಣ, ಕುರಿ, ಮೇಕೆ, ಕೋಳಿ, ಹಂದಿ, ಮುಂತಾದವುಗಳನ್ನು ಬಲಿಕೊಡುವುದು ಸ್ವಾಭಾವಿಕವಾಯಿತು. ಸಾಮಾನ್ಯವಾಗಿ ಹಂದಿ ಅಸ್ಪೃಶ್ಯ ಪ್ರಾಣಿ, ಹೊಲಸಿನ ಜೊತೆಗೆ ಇದರ ಸಾಮಿಪ್ಯವಿರುವುದೇ ಇದಕ್ಕೆ ಕಾರಣ. ಹೀಗಾಗಿ ದಂಡಿಗಮ್ಮ ದೇವತೆಗೆ ಹೊಲೆಯ ಪ್ರಜಾರಿಯಾಗಿರುವುದು ಹೇಗೆ ವಿಶೇಷವೋ ಅದೇ ರೀತಿ ಹಂದಿಯನ್ನು ಪರದ ಊಟಕ್ಕೆ ಬಡಿಸುವುದು ಕೂಡ ಎಂಬುದು ಗಮನಾರ್ಹ.

'ಹರಕೆಯ ಹಣ'ಕತೆಯಲ್ಲಿ ಗಮನಿಸಬೇಕಾದ ಮತ್ತೊಂದು ಪ್ರಮುಖ ಅಂಶವೆಂದರೆ ಗ್ರಾಮದೇವತೆಗಳದ್ದು, ಭಾರತ ದೇಶ ಮೂಲತಃ ಮಾತೃ ಪ್ರಧಾನ

ಕುಟುಂಬ ವ್ಯವಸ್ಥೆಯನ್ನು ಹೊಂದಿದ್ದ ಭೂಮಿ. ಹೀಗಾಗಿಯೇ ಭಾರತದ ಪ್ರತಿಹಳ್ಳಿಗಳಲ್ಲಿಯೂ ಗ್ರಾಮದೇವತೆಗಳ ಗುಡಿಗಳಿವೆ. ಇದಕ್ಕೆಲ್ಲ ಪ್ರೇರಣೆ ತಾಯಿಯ ಕಲ್ಪನೆ. ತಾಯಿ ತನ್ನ ಮಕ್ಕಳನ್ನು ಪೋಷಿಸಿ ಬೆಳೆಸುವಂತೆ ಇಡೀ ಗ್ರಾಮದ ಆರೋಗ್ಯ, ಅಭಿವೃದ್ಧಿ ಗ್ರಾಮದೇವತೆಗಳ ಮೇಲಿರುತ್ತದೆ. ಹೀಗಾಗಿಯೇ ಗ್ರಾಮದೇವತೆಗಳಿಗೂ ಜನಪದ ಜೀವನಕ್ಕೂ ನಿಕಟವಾದ ಸಂಬಂಧವಿದೆ. ಈ ಸಂಬಂಧ ಎಷ್ಟು ಗಾಢವಾದುದು ಎಂಬುದು ಅವರು ಗ್ರಾಮ ದೇವತೆಗಳಿಗೆ ಒದಗಿಸಿರುವ ಗುಡಿ, ಗುಡ್ಡ, ತಮ್ಮಡಿ, ಬಸವ, ಒಡವೆ, ವಸ್ತ್ರ, ಕೊಂಡ, ಬಂಡಿ, ವಾಹನ, ಹರಕೆ, ಮೊದಲಾದ ಸವಲತ್ತುಗಳಿಂದ ವೇದ್ಯವಾಗುತ್ತದೆ. ಎಲ್ಲ ಗ್ರಾಮದೇವತೆಗಳಿಗೂ ಗುಡಿಗಳಿರುವುದಿಲ್ಲ. ಅದು ಆಯಾ ಗ್ರಾಮದ ಜಾತಿ ಸಮಾಜದ ಜನರ ಆರ್ಥಿಕ ಸ್ಥಿತಿಗತಿಯನ್ನು ಅವಲಂಬಿಸಿರುತ್ತದೆ.

"ತನ್ನ ಬಯಕೆ ಚಿಗುರಿ, ಕಾಯಾಗಿ, ಹಣ್ಣಾಗಿ ಭಾಗ್ಯ ನೀಡುವ ಕಾಲದಲ್ಲಿ ಉತ್ತು ಬಿತ್ತು ನಾಟಿ ಹಾಕಿದವನ ಎದೆಯಲ್ಲಿ ಹೇಳಲಾರದಂಥ ಸುಖ ಮನೆಮಾಡುತ್ತದೆ. ಫಲದ ಭಾರದಿಂದ ಭೂಮಿಗೆ ಕುಸಿದು ಮುಗಿಲು ನೋಡುವ ನಸು ಹಳದಿ ಬಣ್ಣದ ಭತ್ತದ ಬೆಳೆಯನ್ನು ಕೊಯ್ದು, ಹೊರೆ ಕಟ್ಟಿ ಸಾಗಿಸುವಾಗ ಆನಂದದ ಅಲೆಗಳೇಳುತ್ತವೆ. ವರ್ಷವಿಡೀ ದುಡಿದುದರ ಫಲ ಎದುರು ಮೂಡಿ ನಿಂತಾಗ 'ಒಕ್ಕಲು ಮಕ್ಕಳು' ಹೂವಾಗುತ್ತಾರೆ, ಸುಗ್ಗಿ ತರುವ ಸಿರಿಯಿಂದ."[8]

ತನ್ನ ಜೀವನದ ವಿಶೇಷ ಸಂದರ್ಭಗಳಲ್ಲೆಲ್ಲ ಹಾಡಿ ನಲಿಯುವ ರೈತ ಸುಗ್ಗಿಯ ಸಮಯದಲ್ಲಿ ಸಂಭ್ರಮಿಸದೆ ಇರುತ್ತಾನೆಯೇ ಭತ್ತದ ಪೈರನ್ನು ಕೊಯ್ದು ಬಡಿದು ಭತ್ತವನ್ನು ಮನೆ ಸೇರಿಸುವ ತನಕ ಹಲವಾರು ಸಾಂಪ್ರದಾಯಿಕ ವಿಧಿ ವಿಧಾನಗಳನ್ನು ನೆರವೇರಿಸುತ್ತಾನೆ. ಹಣ್ಣಾಗಿ ನಿಂತ ಭತ್ತದ ಪೈರಿಗೆ ಆತ ಕುಡುಗೋಲನ್ನು ಹಾಕುವುದು ಸಾಂಪ್ರದಾಯಿಕ ಪೂಜೆಯನ್ನು ಸಲ್ಲಿಸಿದ ನಂತರವೇ. ಕಣ್ಣಿಗೆ ಕಾಣುವ ಸೂರ್ಯ, ಚಂದ್ರ, ಸುತ್ತಲಿನ ಪ್ರಕೃತಿಯೇ ಪೂಜಾ ದೇವತೆಗಳು. ಭತ್ತದ ಕಣಜ ಹಿಗ್ಗಲಿ ಎಂಬುದೇ ಅವನ ಕೋರಿಕೆ. ಭತ್ತ ಬಡಿಯುವಾಗ ಹೇಳುವ

ನಾಟಕದ ಪದಗಳು, ಸುಗ್ಗಿಯ ಹಾಡುಗಳು ಸಂಪ್ರದಾಯಗಳೇನೋ ಎಂಬಷ್ಟು ಪರಿಚಿತವಾಗಿ ಗದ್ದೆಯ ಬಯಲಿನಲ್ಲಿ ಗುಯ್ ಗುಡುತ್ತವೆ.

"ವರ್ಷವರ್ಷವೂ ಭತ್ತ ಬಡಿಯುವುದಕ್ಕೆ ಮಧ್ಯರಾತ್ರಿಯಲ್ಲಿ ಬರುತ್ತಿದ್ದ ಇದೇ ಆಳುಗಳದೇನು ಕೇಕೆ, ಕೂಗು, ನಾಟಕದ ಪದಗಳು! ಒಂದೆ, ಎರಡೆ, ಕೋಳಿ ಕೂಗುವ ಹೊತ್ತಿಗೆ ಬಡಿಯುವುದನ್ನು ನಿಲ್ಲಿಸಿ ನೆಲ್ಲುಲ್ಲಿನ ಬೆಂಕಿಯನ್ನು ಹಾಕಿಕೊಂಡು, ಹಸಿಕಡಲೆಕಾಯನ್ನು ಸುಟ್ಟು ಬೆಲ್ಲವನ್ನು ನಂಜಿಕೊಂಡು ತಿನ್ನುವಾಗ ನೋಡಬೇಕಿತ್ತು ಅವರನ್ನು."[9]
ಶಿವರಾಮಣ್ಣ, ಪುಟ್ಟಸ್ವಾಮಿಯ ವಿರಸದ ನಡುವೆಯೇ ರಾಮಣ್ಣನವರು ಹರ್ಷದ ಸುಗ್ಗಿಯನ್ನು ದರ್ಶಿಸುವ ತಂತ್ರ ಚನ್ನಾಗಿವೆ.

"ಭೂತಾಯಿ ಕೊಟ್ಟಳು ಭತ್ತವ
ಕಣಜದ ತುಂಬ ತುಂಬೇವು
ಹೊಸ ಬೆಳೆಯ ಅನ್ನಾವ ಮಾಡಿ
ಮನೆಯೆಲ್ಲ ಉಂಡು ನಲಿದೇವು......ಸುಗ್ಗಿಯ ನೆನದೇವು
.........ನೆನದೇವು ಸುಗ್ಗಿಯ" ಎಂದು ಒಬ್ಬ ಹಾಡಿದ.

"ಕೀ......ಕೀ.......ಈ ಸುಗ್ಗಿಯ ನೆನೆದೇವು.......ಹೋ......ಹೋ"
ಎಂದು ಹಿಮ್ಮೇಳ ಕೊಟ್ಟರು. ಇನ್ನೊಬ್ಬ ಮುಂದುವರಿಸಿ ಧನಿಯೆತ್ತಿ ಹಾಡಿದ:

"ನಮ್ಮೂರ ಕಾಯೋಳೆ ನಮ್ಮವ್ವ
ಎಲ್ಲವ್ವ ನಂಮನೆ ಒಚೆದಾಗಿ ಇರಸವ್ವ
ನಂಮನೆ ಕಣಜ ಹಿಗ್ಗಲವ್ವ"[10]

ಮಂಡ್ಯ ಜಿಲ್ಲೆ ಜನಪದ ಸಾಹಿತ್ಯದ ತವರಿನಂತಿದೆ ಇದಕ್ಕೆ ಕಾರಣವೆಂದರೆ ಇದು ಶ್ರಮಜೀವಿ ರೈತನ ನೆಲ. ಅವನ ಉಳುವ, ಬಿತ್ತುವ, ಕೊಯ್ಯುವ, ಬಡಿಯುವ, ಎಲ್ಲಾ ಸಮಯದ ಸಾಹಿತ್ಯ ಎಲ್ಲಿ ದೊರೆಯುತ್ತದೆ. ಇನ್ನು ಭತ್ತದ ರಾಶಿಯನ್ನು

ಕಣದಲ್ಲಿ ಗುಡ್ಡೆ ಹಾಕಿ ಸಾಂಪ್ರದಾಯಿಕ ಪೂಜಾವಿಧಾನಗಳನ್ನು ನೆರವೇರಿಸಲಾಗುತ್ತದೆ.

"ಪೂಜೆಗೆ ಎಲ್ಲ ಸಿದ್ಧತೆಗಳನ್ನು ಮಾಡುತ್ತಿದ್ದಾನೆ ಸಿದ್ದಣ್ಣ. ರಾಶಿಯ ಸುತ್ತಲೂ ಬೂದಿಯ ಗೆರೆಯನ್ನು ಬಿಟ್ಟ. ರಾಶಿಯ ತುದಿಗೆ ಕುಡಿಗೋಲೊಂದನ್ನು (ಅದರ ಹಿಡಿಯನ್ನು ಕೆಳಗೆ ಮಾಡಿ, ಅದರ ಬಾಯಿ ಮೂಡಲ ದಿಕ್ಕನ್ನು ನೋಡುವಂತೆ) ಸರಿಯಾಗಿ ಸಿಕ್ಕಿಸಿದ. ಬೆರಳಿನಲ್ಲೆ ರಾಶಿಯ ಒಂದು ಮುಖಕ್ಕೆ ಸೂರ್ಯ, ಚಂದ್ರ, ತ್ರಿಶೂಲಗಳನ್ನು ಬರೆದ..........ಸಿದ್ದಣ್ಣ ತೆಂಗಿನ ಕಾಯನ್ನು ಒಡೆದು, ನೀರನ್ನು ರಾಶಿಯ ಸುತ್ತ ಚಿಮುಕಿಸಿದ ಬಾಳೆಹಣ್ಣಿನ ತೊಟ್ಟನ್ನು ಮುರಿದು ಗಂಧದ ಕಡ್ಡಿ ಮತ್ತು ಉಂಡೆ ಕರ್ಪೂರವನ್ನು ಹಚ್ಚಿದ, ಕಾಯಿಯ ಹೋಳುಗಳನ್ನು ತಟ್ಟೆಯಲ್ಲಿಟ್ಟ. ಕರ್ಪೂರದಾರತಿಯನ್ನು ಶಿವರಾಮಣ್ಣ ರಾಶಿಗೆ ಎತ್ತಿದರು."[11]

ಸಂಪ್ರದಾಯದ ಚೌಕಟ್ಟಿನಲ್ಲಿ ಸ್ತ್ರೀಯರ ಶೋಷಣೆ ನಿರಂತರವಾಗಿ ನಡೆಯುತ್ತಲೇ ಇದೆ. ಗಂಡಸರು ತಮ್ಮ ತೀಟೆ, ತೆವಲುಗಳನ್ನು ತೀರಿಸಿಕೊಳ್ಳಲು ಹಲವಾರು ಸಂಪ್ರದಾಯಗಳನ್ನು ಹುಟ್ಟು ಹಾಕಿದ್ದಾರೆ. ಇವುಗಳಲ್ಲಿ ವೇಶ್ಯಾವಾಟಿಕೆ, ದೇವದಾಸಿ ಪದ್ಧತಿ, ಬೆತ್ತಲೆ ಸೇವೆ, ಪ್ರಮುಖವಾದವುಗಳಾಗಿವೆ. "ಬೇಲಾ" ವೇಶ್ಯಾ ಸಮಸ್ಯೆಯನ್ನು ಕುರಿತ ತುಂಬ ನಯನಾಜೂಕುಳ್ಳ ಪ್ರೌಢ ಪ್ರವ್ಮದೆಯನ್ನು ಚಿತ್ರಿಸುವ ಕೃತಿ. ಆಕಸ್ಮಿಕವಾಗಿ ಕೇಳಿದ ಆಕೆಯ ಪರಿಚಯ ಗಾಢ ಸ್ನೇಹವಾಗಿ, ಕಾಡುವ ಪ್ರೇಮವಾಗಿ ಬೆಳೆಯುವುದು ಈ ಕತೆಯ ವಿಶೇಷ. ವಿಶ್ವ ಆರೋಗ್ಯ ಸಂಸ್ಥೆಯ ಸಿಡುಬು ರೋಗನಿವಾರಣೆ ಯೋಜನೆಯಲ್ಲಿ ಭಾಗವಹಿಸಲು ಕರ್ನಾಟಕದಿಂದ ಹೋದ ವೈದ್ಯನ ಅನುಭವವನ್ನು ದಾಖಲಿಸುತ್ತದೆ. ಡಾಕ್ಟರನ ಸಣ್ಣತನವನ್ನು ತೋರಿಸುತ್ತಲೇ ಬೇಲಾಳ ಸುಸಂಸ್ಕೃತ ಮನಸ್ಸನ್ನು ಬಿಡಿಸುವ ವಿಧಾನ ಆಕರ್ಷಕವಾಗಿದೆ. ಸಿಡುಬು ರೋಗದಂತೆ ವೇಶ್ಯಾವೃತ್ತಿಯೂ ಒಂದು ಸಾಮಾಜಿಕ ಸಾಂಕ್ರಾಮಿಕ ರುಜೆ ಎಂಬುದನ್ನು ಕತೆ ಏಕಕಾಲದಲ್ಲಿ ಮನವರಿಕೆ ಮಾಡಿಕೊಡುತ್ತದೆ. ಅದರಲ್ಲೇ ಮುಳುಗಿಯೂ ಆ ಬಗ್ಗೆ ವಸ್ತುನಿಷ್ಠವಾಗಿ ಚಿಂತಿಸುವ ಬೇಲಾಳಲ್ಲಿ ಪ್ರಬುದ್ಧತೆ ಇದೆ.

ವಿಟ ಮತ್ತು ನಟಿಯ ಮಾತುಕತೆಯಲ್ಲಿ ದೇಶಪ್ರೇಮ ಪ್ರಕಟವಾದರೂ ಅದು ಕ್ರಿಯಾರೂಪ ತಾಳುವುದಿಲ್ಲ ಈ ರೋಗಗಳು ಒಂದಕ್ಕೊಂದು ತಳುಕು ಹಾಕಿಕೊಂಡು ಮೂಡುವ ಸಾಂಕೇತಿಕತೆ ಕಥನ ಕಲೆಯ ಸಿದ್ಧಿ ಎನ್ನಬಹುದು. ಊಳಿಗಮಾನ್ಯ ಪದ್ಧತಿಯ ಒಂದು ಆಚಾರವನ್ನು ಸಂತೋಷದಿಂದ (ನಾಯಕನಯ ದೃಷ್ಟಿಯಿಂದ) ಅನುಭವಿಸಿದರೂ (ನಾಯಕಿಯ ದೃಷ್ಟಿಯಿಂದ) ವಿಷಾದ ಕತೆಯಲ್ಲಿ ತುಂಬಿದೆ. ಸಂಗೀತ ಸಾಹಿತ್ಯ, ನೃತ್ಯ, ಕಲೆಗಳಲ್ಲಿ ಆಕೆಗಿರುವ ಪರಿಣತಿ ವಿಸ್ಮಯಕರವಾಗಿದೆ.''[12]

ಕ್ರಾಂತಿಯನ್ನು ಅರ್ಥೈಸುವಲ್ಲಿ ಬೇಲಾ ಮತ್ತು ವೈದ್ಯರ ನಡುವೆ ಅಭಿಪ್ರಾಯಗಳಲ್ಲಿ ಭಿನ್ನತೆಯಿದೆ. ಶೋಷಣೆಯ ನೋವು ಗೊತ್ತಿರದ ವೈದ್ಯರ ತಿಳುವಳಿಕೆಗೂ ಶೋಷಣೆಯ ನೆರಳಲ್ಲೆ ಬದುಕುತ್ತಿರುವ ಬೇಲಾಳ ಅನುಭವಕ್ಕೂ ವ್ಯತ್ಯಾಸವಿದೆ. ಒಂದು ಆದರ್ಶದ ನೋಟ ಮತ್ತೊಂದು ಕಠೋರ ಸತ್ಯ. ಕ್ರಾಂತಿ ಎಂದರೇನು? ಎಂಬ ಬೇಲಾಳ ಪ್ರಶ್ನೆಗೆ ವೈದ್ಯರ ಉತ್ತರವಿದು.

"ಈಗಿರುವ ಭ್ರಷ್ಟ ವ್ಯವಸ್ಥೆಯನ್ನು, ಸಂಪೂರ್ಣವಾಗಿ ಬದಲಾಯಿಸುವುದು. ಭಾರತದಲ್ಲಿ ಸರ್ವರೂ ಸಮನಾಗಿ ಬದುಕುವಂತೆ ಮಾಡುವುದು. ದಬ್ಬಾಳಿಕೆಯಿಂದ ಶೋಷಣೆಯಿಂದ ಮುಕ್ತರನ್ನಾಗಿಸುವುದು".

"ನಿಮ್ಮ ಕ್ರಾಂತಿಯ ಕಲ್ಪನೆ ಕಿವಿಗೆ ಇಂಪಾಗಿದೆ. ಶೋಷಣೆಯಿಂದ ದಬ್ಬಾಳಿಕೆಯಿಂದ ಇಡೀ ಭಾರತದ ಜನತೆಯನ್ನು ನೀವು ಮುಕ್ತರನ್ನಾಗಿ ಮಾಡುವುದಿರಲಿ; ತಲತಲಾಂತರದಿಂದ, ಮೌಢ್ಯ ಸಂಪ್ರದಾಯವೊಂದರ ಬಲೆಯಲ್ಲಿ ಸಿಕ್ಕಿ ಒದ್ದಾಡುತ್ತಿರುವ, ತಿನ್ನಲು ಉಡಲು ಸಾಕಷ್ಟಿದ್ದರೂ ಗೌರವದಿಂದ ವಂಚಿತರಾಗಿ ಬದುಕುತ್ತಿರುವ ನನ್ನ ಜನಾಂಗದ ಹೆಣ್ಣುಗಳು, ಗೌರವಾಗಿ ಸಮಾಜದಲ್ಲಿ ತಲೆ ಎತ್ತಿ ಬದುಕುವಂತೆ ಮಾಡಿ........ಅದೇ ದೊಡ್ಡ ಕ್ರಾಂತಿ!"

"ಬೇಲ ಇದು ಅಸಾಧ್ಯವಾದ ವಿಷಯವಲ್ಲ"

"ಡಾಕ್ಟರ್! ವೇಶ್ಯಾವೃತ್ತಿಯನ್ನು ನಿರ್ಮೂಲನ ಮಾಡುವುದು, ಸಿಡುಬನ್ನು ನಿರ್ಮೂಲನ ಮಾಡುವಷ್ಟು ಸುಲಭವಲ್ಲ! ಸಿಡುಬಿಗೆ ಒಂದು ವಿಷಕ್ರಿಮಿ ಕಾರಣ. ಆದರೆ ನಮ್ಮ ವೃತ್ತಿಗೆ ಮೂಲಕಾರಣ 'ಗಂಡು!" ಅಂದರೆ ಗಂಡಸಿನ ದಬ್ಬಾಳಿಕೆ ಮತ್ತು ಹೆಣ್ಣಿನ ಅಸಹಾಯಕತೆ!"[13]

ಜಾತೀಯತೆಯನ್ನು ತೊಲಗಿಸಲು ಅಂತರ್ಜಾತಿ ವಿವಾಹಗಳು ನಡೆಯುವಂತೆ ವೇಶ್ಯಾ ಸಮಸ್ಯೆಯನ್ನು ಪರಿಹರಿಸುವಂತಹ ಪ್ರಯತ್ನಗಳು ನಡೆಯದಿರುವುದು ದುರದೃಷ್ಟಕರ ಸಂಗತಿಯಾಗಿದೆ. ಇಂದಿಗೂ ವಿಧವಾವಿವಾಹ ಅಷ್ಟಾಗಿ ಚಾಲ್ತಿಯಲ್ಲಿಲ್ಲದಿರುವುದನ್ನು ಗಮನಿಸಿದರೆ ವೇಶ್ಯೆಯನ್ನು ಗರತಿಯರನ್ನಾಗಿ ಮಾರ್ಪಡಿಸುವುದು ಅಸಾಧ್ಯವೇ ಸರಿ. ಹೀಗಾಗಿ ಬೇಲಾಳ ಮಾತುಗಳು ಸಾರ್ವತ್ರಿಕ ಸತ್ಯವಾಗಿ ಕಾಣುತ್ತವೆ. ಆದರೆ ಪ್ರಸ್ತುತ ಕತೆಯಲ್ಲಿ ಗಮನಿಸಬೇಕಾದ ಅಂಶವೆಂದರೆ ಬೇಲಾಳಲ್ಲಿ ವೇಶ್ಯಾ ವೃತ್ತಿಯ ನೋವು ವ್ಯಕ್ತವಾಗಿರುತ್ತದೆಯೇ ಹೊರತು ಅದನ್ನು ಪ್ರತಿಭಟಿಸುವ ಮನೋಭಾವ ವ್ಯಕ್ತವಾಗುವುದಿಲ್ಲ.

**ಅಡಿಟಿಪ್ಪಣಿಗಳು:**

1. ಬೆಸಗರಹಳ್ಳಿ ರಾಮಣ್ಣ : ಕನ್ನಂಬಾಡಿ : ಪುಟ : 244
2. ಅದೇ : ಪುಟ : 247
3. ಅದೇ : ಪುಟ : 246
4. ಕೃಷ್ಣಪ್ಪ : ಅರಕೆರೆ ಗ್ರಾಮದ ಸಾಹಿತ್ಯ, ಸಾಂಸ್ಕೃತಿಕ ಅಧ್ಯಯನ: ಪುಟ: 50
5. ಅದೇ : ಪುಟ : 57
6. ಬೆಸಗರಹಳ್ಳಿ ರಾಮಣ್ಣ : ಕನ್ನಂಬಾಡಿ : ಪುಟ : 172
7. ಅದೇ : ಪುಟ : 173
8. ಅದೇ : ಪುಟ : 1
9. ಅದೇ : ಪುಟ : 2
10. ಅದೇ : ಪುಟ : 5
11. ಅದೇ : ಪುಟ : 14
12. ಅದೇ : ಪುಟ : 23
13. ಅದೇ : ಪುಟ : 320

## 6. ಸಮಕಾಲಿನ ಸ್ಪಂದನ

"ಒಂದು ಕಡೆ ಅನುಭವ, ಮತ್ತೊಂದು ಕಡೆ ನಿರ್ಧಿಷ್ಟ ವಿಚಾರಧಾರೆ, ಹಾಗೂ ಮಗದೊಂದು ಕಡೆ ಸಾಹಿತ್ಯವೆಂಬ ಕಲಾಮಾಧ್ಯಮದ ಅನನ್ಯತೆ, ಹೀಗೆ ಮೂರು ನಿಯಂತ್ರಕಗಳಿಗೆ ಬದ್ದನಾಗಿರಬೇಕಾಗಿರುವ ಸಾಹಿತಿಯ ಬಿಕ್ಕಟ್ಟುಗಳು ಬಹುಮುಖ್ಯವಾದವು. ಇದೆಲ್ಲದರ ಜೊತೆಗೆ ಸಾಮಾಜಿಕವಾದ ಕ್ರಿಯೆಯಲ್ಲಿ ತೊಡಗಿಸಿಕೊಳ್ಳದೆ ಕೇವಲ ಸಾಹಿತ್ಯಕೃತಿಯ ಒಡಲಿನಲ್ಲಿ ಬದ್ಧನಾಗಿರಬೇಕೆನ್ನುವ ಸಾಹಿತಿಯ ಅಧಿಕೃತತೆ ಮತ್ತು ನಿಷ್ಠೆಗಳು ಪ್ರಶ್ನಿತವಾಗುತ್ತವೆ. ತನ್ನ ಕಲೆಯು ಬದುಕಿನಿಂದ ಆಚೆಗೆ ಇರಬೇಕಾದ ಸ್ವಯಂಭುವೆಂದು ಯಾರು ತಿಳಿಯುವಂತಿಲ್ಲ. ಸಾರ್ವಕಾಲಿಕವಾದ ಕಾಳಜಿಗಳ ನೆಪದಲ್ಲಿ ವರ್ತಮಾನದ ಒತ್ತಡಗಳನ್ನು ನಿರಾಕರಿಸುವ ಕಲಾವಿದನು ಉಭಯಭ್ರಷ್ಟನಾಗುತ್ತಾನೆ. ಅದರಲ್ಲೂ ಆಧುನಿಕ ನಾಗರಿಕತೆಯು ಎದುರಿಸುತ್ತಿರುವ ಬಹುಮುಖಿ ಬಿಕ್ಕಟ್ಟುಗಳ ಸಮಕ್ಷಮದಲ್ಲಿ ಮೌನವು ಸಾಧ್ಯವೇ ಇಲ್ಲ".[1]

ಎಪ್ಪತ್ತರ ದಶಕ ಇಡೀ ಭಾರತದಲ್ಲಿ ಎಂತೋ, ಅಂತೆಯೇ ಕರ್ನಾಟಕದಲ್ಲಿಯೂ, ಹೊಸ ಚಿಂತನೆಗಳಿಗೆ ತೆರೆದುಕೊಂಡ ಕಾಲ. ದಲಿತವರ್ಗದಲ್ಲಿ ಪ್ರಥಮ ಬಾರಿಗೆ ಶಿಕ್ಷಣದ ಅವಕಾಶ ಹೆಚ್ಚು ಜನರಿಗೆ ದೊರೆತದ್ದರಿಂದ ಸಾಮಾಜಿಕ ಎಚ್ಚರ ಉಂಟಾಯಿತು. ಜಾತಿ, ಅಸಮಾನತೆ, ಮತ್ತು ದೌರ್ಜನ್ಯಗಳ ವಿರುದ್ಧ ದಲಿತರು ಸಂಘಟಿತರಾಗಲು ಪ್ರಯತ್ನಿಸುತ್ತಿದ್ದರು. ಭೂ ಸುಧಾರಣಾ ಕಾನೂನಿಂದಾಗಿ ಅಲ್ಲಿಯವರೆಗೆ ಕೃಷಿ ಕೂಲಿಗಳಾಗಿದ್ದ ಕೆಳಜಾತಿ ವರ್ಗದ ಜನರಿಗೆ ಭೂ ಒಡೆತನ ಸಿಕ್ಕಿ ಸ್ವಾಭಿಮಾನಿಗಳಾಗುವ ಸೂಚನೆಗಳು ಕಂಡು ಬಂದವು. ಸಾಹಿತ್ಯಿಕವಾಗಿ ದಲಿತ-ಬಂಡಾಯ ಸಾಹಿತ್ಯ ಚಳುವಳಿ ಚಿಗುರೊಡೆಯಿತು. ರಾಜಕೀಯವಾಗಿ ಪಾಕಿಸ್ತಾನ, ಚೀನಾಗಳು ಭಾರತದ ಮೇಲೆ ಆಕ್ರಮಣ ಮಾಡಿದವು. ತುರ್ತು ಪರಿಸ್ಥಿತಿ ಘೋಷಣೆಯಾಗಿ ಜನಜೀವನ ಅಸ್ತವ್ಯಸ್ತವಾಯಿತು. ಹೀಗೆ ಸಾಮಾಜಿಕವಾಗಿ, ರಾಜಕೀಯವಾಗಿ, ಸಾಹಿತ್ಯಿಕವಾಗಿ ಉಂಟಾದ ಮಹತ್ತರ ಬದಲಾವಣೆಗಳು

ಹಳ್ಳಿಗಳಲ್ಲಿ ಉಂಟುಮಾಡಿದ ಪರಿಣಾಮಗಳನ್ನು ರಾಮಣ್ಣನವರ ಕತೆಗಳು ಸೂಕ್ಷ್ಮವಾಗಿ ಸೆರೆಹಿಡಿಯುತ್ತವೆ.

"ನಮ್ಮ ದೇಶದ ಮೇಲೆ ನೆರೆಯ ರಾಷ್ಟ್ರಗಳು ದಾಳಿ ಮಾಡಿದಾಗ, ಶೇಕಡ ಅರವತ್ತಕ್ಕೂ ಹೆಚ್ಚು ಅನಕ್ಷರಸ್ಥರೂ ಕಡು ಬಡವರೂ ಇರುವ ಭಾರತದ ಹಳ್ಳಿಗಾಡುಗಳಲ್ಲಿ, ಶ್ರೀಸಾಮಾನ್ಯರ ಮನಸ್ಥಿತಿ ಹೇಗಿತ್ತು? ಅವರ ಪ್ರತಿಕ್ರಿಯೆ ಏನ್? ಎಂಬುದಕ್ಕೆ "ಮಹಾನವಮಿ' ಒಂದು ಉಜ್ವಲ ಉದಾಹರಣೆ. ಅದು ಬಡ ಬಗ್ಗರ ದೇಶಭಕ್ತಿಗೆ ನಿರ್ಮಿಸಿದ ಸ್ಮಾರಕ. ವರ್ಷಕ್ಕೊಮ್ಮೆ ಬರುವ ಮಹಾನವಮಿ ಹಬ್ಬ ಮಾಡಲು ದುಡ್ಡಿಲ್ಲದಿದ್ದರೂ, ತಮಗೆ ಮಾನ ಮುಚ್ಚಲು ಸೀರೆ ಇಲ್ಲದಿದ್ದರೂ, ಇರುವ ದುಡ್ಡಿನಲ್ಲೇ ಸ್ವಲ್ಪ ಭಾಗವನ್ನು ದೇಶದ ಯುದ್ಧದ ಫಂಡ್ಗೆ ಖಜಾನೆಯಲ್ಲಿ ಕಟ್ಟುವುದು ದೊಡ್ಡ ತ್ಯಾಗವಾಗಿದೆ. ಇದೇ ನಿಜವಾದ ಮಹಾನವಮಿ ಹಬ್ಬ! ಹೀಗೆ ಸಾಂಕೇತಿಕತೆಯನ್ನು ರಾಮಣ್ಣ ಕತೆಗಳಲ್ಲಿ ನಿರಾಯಾಸವಾಗಿ ತರುತ್ತಾರೆ."[2]

"ನಾನೇನು ಬ್ಯಾಡಾ ಅಂದ್ನೇ ತಕ್ಕೊಂಡೋಗಿ ನನಗೆ ಸೀರೆ ಬ್ಯಾಡ. ಒಂದು ರವಿಕೆ ಸಾಕು. ಸೀರೇ ದುಡ್ಡು ಸರ್ಕಾರದ ಖಜಾನೆಗೆ ಕಟ್ಟಿ ಮೊದಲು ದೇಶ ಉಳಿದರೆ ಅಲ್ವೇ ನಾವು ಬದುಕಿರೋದು?" ಎಂದು ಪುಟ್ಟನಿಂಗಿ ಹೇಳುವ ಮಾತುಗಳಾಗಲಿ, "ಹಂಗಾದ್ರೆ ನನಗೂ ಬ್ಯಾಡ, ಸೀರೆಗೆ ಕೊಡು ದುಡ್ಡನ್ನೇ ಸರ್ಕಾರಿ ಖಜಾನೆಗೆ ಯುದ್ಧದ ಫಂಡ್ಗೆ ಕಟ್ಟುಬುಡು ಅಂದೆ!"[3] ಎಂಬ ನಿಂಗಕ್ಕನ ಮಾತುಗಳಾಗಲಿ ಶ್ರೀಸಾಮಾನ್ಯನ ದೇಶಭಕ್ತಿಗೆ ಹಿಡಿದ ಕನ್ನಡಿಯಾಗಿದೆ. ಸಾಮಾನ್ಯವಾಗಿ ಹೆಂಗಸರಿಗೆ ಒಡವೆ, ಸೀರೆಯ ಬಗೆಗೆ ಬಹಳ ಆಸೆಯಿಟ್ಟುಕೊಂಡಿರುತ್ತಾರೆ. ದೇಶಕ್ಕಾಗಿ ಅದನ್ನು ತ್ಯಾಗ ಮಾಡುತ್ತಾರೆ ಎಂದರೆ ಅವರ ರಾಷ್ಟ್ರಭಕ್ತಿಗೆ ಬೆಲೆ ಕಟ್ಟಲು ಸಾಧ್ಯವಿಲ್ಲ.

ತಾನು ಹುಟ್ಟಿ, ಬೆಳೆದ ರಾಜ್ಯ, ರಾಷ್ಟ್ರದ ಬಗೆಗೆ ಪ್ರತಿಯೊಬ್ಬರಿಗೂ ಅಭಿಮಾನವಿರುತ್ತದೆ. ಅದರಲ್ಲೂ ಹಳ್ಳಿಗರು ತಮ್ಮ ದೇಶದ ಬಗೆಗೆ ಹೊಂದಿರುವ

ಭಕ್ತಿಗೆ ಹೃದಯ ವೈಶಾಲ್ಯತೆಯಿದೆ. ತಮ್ಮ ದೇಶಕ್ಕೆ ಕೇಡು ಉಂಟಾಗುತ್ತಿದೆಯೆಂದರೆ ತನಗೆ ಏನೋ ಆದಂತಹ ತವಕ ಅವರಲ್ಲಿ ಮನೆಮಾಡಿರುತ್ತದೆ. ಚೀನಾ, ಪಾಕಿಸ್ತಾನಗಳು ಭಾರತದ ಮೇಲೆ ಯುದ್ಧವನ್ನು ಸಾರಿದಾಗ ಅದರ ಸಾರ ಗ್ರಾಮೀಣ ಬದುಕಿನಲ್ಲಿ ಬಿತ್ತರಗೊಂಡ ಬಗೆಯನ್ನು ರಾಮಣ್ಣನವರು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ.

"ಪಾಕಿಸ್ತಾನದೋರು ಇಮಾನದೇಲಿ ಬಂದು ಬಾಂಬಾಕ್ತಾಯಿದ್ದಾರಂತೆ ಊರೂರ ಮೇಲೆ! ಭೋ ಜನ ಹೆಂಗಸರು ಮಕ್ಕಳು ನಿಗರಿಕಂಡುವಂತೆ ಅಂದ್ರೆ!! ಶಾನುಭೋಗ ಹೇಳಿದ್ದು ಕೇಳಿಬಿಟ್ಟು ನನಗೆ ತೊಳ್ಳೆ ಎಲ್ಲಾ ನಡುಗುಬುಡ್ತು-ಒಸಿಹೊತ್ತು-ನಮಗೂ ಪಾಕಿಸ್ತಾನದೋರ್ಗು ಯುದ್ಧ ಷುರುವಾಗಿ ಮೂರು ನಾಲ್ಕುದಿನ ಆಯ್ತುಂತೆಕನೋ: ನೀನು ಇನ್ನು ಮಾರ್ನಮಿ ಹಬ್ಬಕ್ಕೆ ದುಡ್ಡಿಲ್ಲ ಅಂತ ಕೊರಗ್ತ್ಲೀಯಿರು! ಮೊದಲು ಅಷ್ಟು ದಿನಗಂಟ ಬದುಕಿದ್ರೆ ನಮ್ಮ ಪುಣ್ಯಕನೋ...... ಪುಣ್ಯ!" ಮೌನ ಮತ್ತೆ ಚೇತರಿಸಿಕೊಂಡಿತು. ಆದರೆ ಸಿದ್ಧಣ್ಣ ಈ ಸಾರಿ ಅದರ ಕತ್ತನ್ನು ಹಿಸುಕಿದ "ಲೋ ಬಿದಕ್ಲ! ಆ ಶಾನುಭೊಗ ಒಬ್ಬ ಕತ್ತಲೇಲಿ ಹೊರಕ್ಕೆ ಬರಬೇಕಾದರೆ ಹೆಂಡತಿ ಕರ್ಕಂಡ್ ಬತ್ತಾನೆ- 'ಅಂಥ ಗಂಡಸು ಅವನು-ಅವನು ಹೇಳುಬುಟ್ಟ, ಅವನು ಕೇಳು ಬುಟ್ಟ; ಕಿಸಬಾಯಿ ಬಿಟ್ಟುಕೊಂಡು ಇಲ್ಲಿ ಹೇಳ್ತಾನೆ. ಅವರ ಇಮಾನ ಎಲ್ಲಾನೂ ನಮ್ಮೂರು ತರಗಲೆ ಉದುರಿಸಿದಂತೆ ಬಡದಾಕ್ತಾವರಂತೆ! ಅವರು ಬರೀ ಸುಳ್ಳು ಕತೆಕಟ್ಟುತ್ತಾ ಅವರೆ ನಮ್ಮ ಜನಗೋಳೆಲ್ಲಾ ಹೆದರ್ಲಿ ಅಂತ. ನಮ್ಮೋರೆ ಗೆಲ್ತಾಯಿರೋದು"[4]

ಈ ಕಾರಣಕ್ಕಾಗಿಯೇ ಭಾರತ ಹಳ್ಳಿಗಳಲ್ಲಿ ಜೀವಿಸಿದೆ ಎಂದು ಹೇಳುವುದು. ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಮಂಡ್ಯ ಜಿಲ್ಲೆಯ ಅಳಿಲು ಸೇವೆಯು ಸೇರ್ಪಡೆಯಾಗಿದೆ. ಶಿವಪುರ ಸತ್ಯಾಗ್ರಹವೇ ಮೊದಲಾಗಿ ಕಾನೂನುಭಂಗ ಚಳುವಳಿ, ಕ್ವಿಟ್ ಇಂಡಿಯಾ ಚಳುವಳಿ, ಮೊದಲಾದ ಸ್ವಾತಂತ್ರ್ಯ ಹೋರಾಟಗಳಲ್ಲಿ ಮಂಡ್ಯ ಜನತೆಯ ಪಾತ್ರ ಎದ್ದು ಕಾಣುತ್ತದೆ. ಕೆ.ವಿ.ಶಂಕರೇಗೌಡರು, ಹೆಚ್.ಕೆ.ವೀರಣ್ಣಗೌಡ,

ಟಿ.ಮರಿಯಪ್ಪ, ಎಂ.ಆರ್.ಕೃಷ್ಣಮೂರ್ತಿ, ಹೀಗೆ ಸ್ವಾತಂತ್ರ್ಯ ಹೋರಾಟಗಾರರ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ.

'ನೂರು ದೇವರನೆಲ್ಲ ನೂಕಾಚೆ ದೂರ ಭಾರತಾಂಬೆಯೇ ದೇವಿ ನಮಗಿಂದು ಪೂಜಿಸುವ ಬಾರ' ಎಂದು ಸ್ವಾತಂತ್ರ್ಯ ಪೂರ್ವ ಭಾರತದಲ್ಲಿ ಮೊಳಗಿದ ಕವಿವಾಣಿ ಸ್ವಾತಂತ್ರ್ಯೋತ್ತರ ಭಾರತದಲ್ಲಿ 'ಎಲ್ಲಿಗೆ ಬಂತು, ಯಾರಿಗೆ ಬಂತು, ನಲವತ್ತೇಳರ ಸ್ವಾತಂತ್ರ್ಯ' ಎಂದು ಪ್ರಶ್ನಿಸುವಂತಾದದ್ದು ವಿಪರ್ಯಾಸವಾಗಿದೆ. ಪೋಲೀಸರ ಲಾಠಿಗೆ ಬಂತು, ಬೂಟಿಗೆ ಬಂತು, ಬಂದೂಕಿಗೆ ಬಂತು, ಎಂದು ಹೇಳುವ ಸಿದ್ಧಲಿಂಗಯ್ಯನವರ ಕವನದ ಸಾಲುಗಳು ತುರ್ತುಪರಿಸ್ಥಿತಿಯ ಘೋರ ವಾತಾವರಣದಲ್ಲಿ ರಚಿತವಾದ 'ಒಂದು ಹುಡುಗನಿಗೆ ಬಿದ್ದ ಕನಸು', "ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು' ಎಂಬ ಕತೆಗಳ ಅರ್ಥವನ್ನು ಧ್ವನಿಸುತ್ತವೆ. "ಈ ಎರಡು ಕತೆಗಳಲ್ಲಿ ತುರ್ತುಪರಿಸ್ಥಿತಿಯ ಕ್ರೂರ ವಾತಾವರಣ ನಡುಕ ಹುಟ್ಟಿಸುವ ರೀತಿಯಲ್ಲಿ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಆಗ ರಾಷ್ಟ್ರದ ಸ್ಥಿತಿ ಹೇಗಿತ್ತೆಂಬುದನ್ನು ಈ ಕತೆಗಳು ನೈಜವಾಗಿ ತೋರುಸುತ್ತವೆ. ಅಂಥ ಉಸಿರು ಕಟ್ಟಿಸುವ ವಾತಾವರಣದಲ್ಲಿದ್ದ ಕತೆಗಾರ ನಿರ್ಲಿಪ್ತವಾಗಿ ಅತ್ಯಂತ ವಿಷಾದದಿಂದ, ಮಾನವ ಸಹಜ ಮರುಕದಿಂದ ಬಿಡಿಸಿದ ಕಲಾಕೃತಿಗಳು ಅವು. ಮೂರು ಮಂಗಗಳ ಮುಖಾಂತರ ಧ್ವನಿತವಾಗಿರುವ ಸತ್ಯಗಳು ಈಸೋಪನ ಕತೆಗಳನ್ನು ನೆನಪಿಸುತ್ತವೆ. ಸರ್ಕಾರ ಎಷ್ಟೇ ಹತ್ತಿಕ್ಕಿದರೂ ಮಾನವ ಸ್ವಾತಂತ್ರ್ಯ ಪ್ರೀತಿಯನ್ನು ದಮನಮಾಡಲಾರದು. ಸರ್ಕಾರವನ್ನು ಟೀಕಿಸುವ ಅವಕಾಶವಿಲ್ಲ ಎಂದಾಗಲೂ ಲೇಖಕ ಕಲೆಯ ಮೂಲಕ ಆ ಕೆಲಸವನ್ನು ಮಾಡುತ್ತಾನೆ. ಅದು ಅವನ ಆಜನ್ಮಸಿದ್ಧ ಹಕ್ಕು. ಈ ಹಕ್ಕನ್ನು ಲೇಖಕ ಚಲಾಯಿಸದೇ ಹೋದಾಗ ಆ ಸಮಾಜ ಸತ್ತಂತೆಯೇ ಸರಿ."[6]

ತನ್ನ ಹೊಟ್ಟೆಪಾಡಿನ ನೆಪದಲ್ಲಿ ಗಾಂಧೀಜಿಯ ತತ್ವಗಳಾದ ಸತ್ಯ, ಅಹಿಂಸೆ, ಸ್ವಾತಂತ್ರ್ಯ, ಸತ್ಯಾಗ್ರಹ, ಪರಿಕಲ್ಪನೆಗಳನ್ನು ಕೋತಿಗಳ ಮೂಲಕ ಪ್ರಚಾರ ಮಾಡುತ್ತಿದ್ದ ಮಂಚನನ್ನು ಪ್ರಾಣಿಹಿಂಸೆ, ಸ್ವಾತಂತ್ರ್ಯಹರಣದ ಆಧಾರದಲ್ಲಿ ಬಂಧಿಸಿದ್ದು ವ್ಯವಸ್ಥೆಯ ಕುತಂತ್ರಕ್ಕೆ ಹಿಡಿದ ಕನ್ನಡಿಯಾಗಿದೆ. "ವಾಸ್ತವವಾಗಿ ಸ್ವಾತಂತ್ರ್ಯಕ್ಕಾಗಿ ಸತ್ಯಾಗ್ರಹ ಮಾಡುತ್ತಿದ್ದ ಎಲ್ಲರನ್ನು ಜೈಲಿಗೆ ಹಾಕುತ್ತಿದ್ದ ಕಾಲದಲ್ಲಿ ಪ್ರಾಣಿಗಳ ಸ್ವಾತಂತ್ರ್ಯ ಹರಣದ ಆಪಾದನೆ ಮೇಲೆ ಮಂಚನನ್ನು ಜೈಲಿಗೆ ಹಾಕಿದ್ದು ವಿಪರ್ಯಾಸವೇ ಸರಿ. ಇಡೀ ವ್ಯವಸ್ಥೆಯನ್ನು ವಿಡಂಬಿಸಲು ಬಳಸಿಕೊಂಡಿರುವ ಕೋತಿ ಆಟ ಮಾತ್ರ ಭಾರತದ ಸ್ವಾತಂತ್ರ್ಯ ಕಲ್ಪನೆಯ ಅತ್ಯುತ್ತಮ ವಿಡಂಬನೆಯಾಗಿ ಇಂದಿಗೂ ಸಮರ್ಪಕವಾಗಿದೆ. ಇಪ್ಪತ್ತು ದಿನಗಳ ನಂತರ ಸೆಂಟ್ರಲ್ ಜೈಲಿನ ಮುಂದೆ ಸತ್ಯಾಗ್ರಹದ ಮೂಲಕವೇ ಸತ್ತು ಬಿದ್ದಿದ್ದ ಕೋತಿಗಳನ್ನು ಕಂಡು, ಅಲ್ಲಿನ ಸೆಂಟ್ರಿ "ಅಂತೂ ಮುಂಡೇವ್ಕೆ ಕೊನೆಗೂ ಸ್ವಾತಂತ್ರ್ಯ ಸಿಕ್ತು ರಾಮ ರಾಮ' ಎಂದು ಆಕಾಶದ ಕಡೆ ನೋಡಿದ ಎಂಬ ಉದ್ಗಾರ, ಕೆಲಸವಿಲ್ಲದೆ ಹೊಟ್ಟೆಪಾಡಿಗಾಗಿ ಕೋತಿ ಆಟ ಕಲಿತಿದ್ದ ಮಂಚನ ಸ್ಥಿತಿಯನ್ನು ತಮಗಿದ್ದ ಅನ್ನದ ದಾರಿಯನ್ನು ಕಸಿದುಕೊಂಡ ಪೋಲಿಸರ ಸ್ವಾತಂತ್ರ್ಯದ ಕಲ್ಪನೆಯನ್ನೂ ಧ್ವನಿಪೂರ್ಣವಾಗಿ ಚಿತ್ರಿಸುವ ಕತೆಯಾಗಿದೆ."[7] ಇಲ್ಲಿ ಕೋತಿಗಳು ಹಸಿವಿನಿಂದ ಸತ್ತಂತೆಯೇ, ಸತ್ಯ, ಅಹಿಂಸೆ, ಸ್ವಾತಂತ್ರ್ಯ, ಸತ್ಯಾಗ್ರಹ, ಪರಿಕಲ್ಪನೆಗಳು ಸ್ವತಂತ್ರ ಭಾರತದಲ್ಲಿ ನಿಷ್ಠ ಪ್ರತಿಪಾದಕರಿಲ್ಲದೆ, ಇದ್ದರೂ ಭ್ರಷ್ಟ ವ್ಯವಸ್ಥೆಯಲ್ಲಿ ಬದುಕಲಾಗದೆ ಸತ್ತಂತಿವೆ. ಸತ್ಯ, ಅಹಿಂಸೆ, ಸತ್ಯಾಗ್ರಹ ಸಂಕೇತದಂತಿದ್ದ ಮೂರು ಮಂಗಗಳು ಪ್ರಜಾಪ್ರಭುತ್ವ ವ್ಯವಸ್ಥೆಯ ತಳದಲ್ಲಿ ಸಿಕ್ಕು ನರಳಿ ಸಾಯುತ್ತವೆ. ಗಾಂಧೀಜಿ ಹೇಳುವ ಕೆಟ್ಟದ್ದನ್ನು ಮಾಡಬೇಡ, ಕೆಟ್ಟದ್ದನ್ನು ನೋಡಬೇಡ, ಕೆಟ್ಟದ್ದನ್ನು ಕೇಳಬೇಡ, ಎಂಬ ತತ್ವಗಳು ಸ್ವತಂತ್ರ ಭಾರತದಲ್ಲಿ ಕೆಟ್ಟದ್ದನ್ನೆ ಮಾಡು, ಕೆಟ್ಟದ್ದನ್ನೇ ನೋಡು, ಕೆಟ್ಟದ್ದನ್ನೆ ಕೇಳು ಎನ್ನುವಂತಾಗಿರುವುದು ದುರಂತವಾಗಿದೆ.

"ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು" ಕತೆ ಗಾಂಧೀಜಿಯ ಆದರ್ಶಗಳನ್ನು ಗುಂಡಿಕ್ಕಿ ಕೊಲ್ಲುವುದನ್ನು ಪರಿಣಾಮಕಾರಿಯಾಗಿ ವ್ಯಂಜಿಸುತ್ತದೆ. ವಾಕ್ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ ಇವುಗಳ ದಮನವನ್ನು ಪೋಲೀಸ್ ವರ್ತನೆಯಲ್ಲಿ ಚಿತ್ರಿಸಲಾಗಿದೆ. ಇಲ್ಲಿನ ಮೂರು ಮಂಗಗಳು ಗಾಂಧೀಜಿಯವರ ಆದರ್ಶ ಮೌಲ್ಯಗಳ ಸಂಕೇತವಾಗಿ ನಿಲ್ಲುತ್ತವೆ. ಪ್ರಜಾಪ್ರಭುತ್ವದ ಮೂಲಭೂತ ಹಕ್ಕುಗಳಾಗಲೀ ಮತ್ತು ಗಾಂಧೀಜಿಯ ಸತ್ಯ, ಅಹಿಂಸೆ, ಸ್ವಾತಂತ್ರ್ಯದ ಮೌಲ್ಯಗಳಾಗಲಿ ಭಗ್ನಗೊಂಡು ಅರ್ಥ ಕಳೆದುಕೊಂಡಿರುವುದನ್ನು ಕತೆ ವ್ಯಂಗ್ಯ, ವಿಡಂಬನೆ ವಿಷಣ್ಣತೆಯಲ್ಲಿಯೇ ಉಗ್ರ ಪ್ರತಿಭಟನೆಯನ್ನು ದಾಖಲಿಸುತ್ತದೆ."[8]

ತುರ್ತುಪರಿಸ್ಥಿತಿಯ ಕಾಲದಲ್ಲಿ ರಾಮಣ್ಣನವರು ಕೋಡಿಯಾಲ ಎಂಬ ಹಳ್ಳಿಯಲ್ಲಿ ವೈದ್ಯರಾಗಿದ್ದಾಗ ಅವರ ಮಗ ರವಿಕಾಂತೇಗೌಡನಿಗೆ ಬಿದ್ದ ಕನಸು 'ಒಂದು ಹುಡುಗನಿಗೆ ಬಿದ್ದ ಕನಸು" ಕತೆಯ ರೂಪವನ್ನು ಪಡೆದುಕೊಂಡಿದೆ. ಪ್ರಸ್ತುತ ಕತೆಯಲ್ಲಿ ಸ್ವಾತಂತ್ರ್ಯ ಪೂರ್ವ ಭಾರತ ಹಾಗೂ ಸ್ವಾತಂತ್ರ್ಯೋತ್ತರ ಭಾರತಗಳ ನಡುವೆ ಹೋಲಿಕೆಗಳನ್ನು ಗುರುತಿಸಲಾಗಿದೆ. ಗಾಂಧೀಜಿ, ರಾಜೇಂದ್ರ ಪ್ರಸಾದ್, ಮೊದಲಾದ ಹಲವಾರು ಸ್ವಾತಂತ್ರ್ಯ ಹೋರಾಟಗಾರರು ಕಂಡಂತಹ ಭವ್ಯ ಭಾರತದ ಕನಸು ಭಗ್ನಗೊಂಡಿರುವುದನ್ನು ಅವರ ಪ್ರತಿಮೆಗಳು ಮೂಕವಾಗಿ ವೀಕ್ಷಿಸುತ್ತಿರುವಂತೆ ಕತೆಯನ್ನು ಹೆಣೆಯಲಾಗಿದೆ.

"ಪರತಂತ್ರದಿಂದ ನಮ್ಮ ವಿಶಾಲ ದೇಶ ಬಿಡುಗಡೆ ಹೊಂದಿ, ನಮ್ಮ ಜನರೆಲ್ಲ ಹಸಿವಿನಿಂದ, ಬಡತನದಿಂದ, ಅಜ್ಞಾನದಿಂದ, ಅನಕ್ಷರತೆಯಿಂದ ವಿಮುಕ್ತರಾಗಿ ಜೊತೆಗೆ ತಮ್ಮ ತಮ್ಮ ಅಭಿಪ್ರಾಯಗಳನ್ನು ಯಾವ ಭೀತಿ ಇಲ್ಲದೆಯೇ ವ್ಯಕ್ತಪಡಿಸಲು ಕರುಣಾಕರನಂಥ ಅಸಂಖ್ಯಾತ ಜನ ತಮ್ಮ ರಕ್ತವನ್ನು ಇಲ್ಲಿ ಚೆಲ್ಲಿದ್ದಾರೆ. ದೇಶದ ಮೂಲೆ ಮೂಲೆಯಲ್ಲೂ ಕರುಣಾಕರನಂಥ ಬಾಲಕರು ಬಲಿದಾನ ಮಾಡಿದ್ದಾರೆ. ಕರುಣಾಕರ ಸದಾ ನಮ್ಮ ಯುವಕರ ಶಕ್ತಿಯ ಸಂಕೇತ□[9]

ಇಂಥ ಕರುಣಾಕರನಂತಹ ಸಾಮಾನ್ಯರ ತ್ಯಾಗ ಸಾರ್ಥಕವಾಗದೆ ಬಡವ ಬಡವನಾಗಿಯೇ ಮುಂದುವರೆದದ್ದು ಮಾತ್ರ ವಿಷಾದನೀಯ.

ಸ್ವತಂತ್ರ ಭಾರತದ ಪ್ರಮುಖ ಆಶಯಗಳಾದ ಸ್ವಾತಂತ್ರ್ಯ, ಸಮಾನತೆಗಳು ಭಾರತೀಯ ಪೌರನ ಮೂಲಭೂತ ಹಕ್ಕುಗಳೆಂದು ಭಾರತದ ಸಂವಿಧಾನ ಮಾನ್ಯ ಮಾಡಲ್ಪಟ್ಟಿದ್ದರೂ ತುರ್ತು ಪರಿಸ್ಥಿತಿಯ ನೆಪದಲ್ಲಿ ವ್ಯಕ್ತಿಸ್ವಾತಂತ್ರ್ಯವನ್ನು ಹತ್ತಿಕ್ಕಲಾಯಿತು. ರಾಜರ ಆಳ್ವಿಕೆಯಲ್ಲಿ ರಾಜರೆ ಪ್ರಭುಗಳಾದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸರ್ಕಾರ ನಿರಂಕುಶವಾಗಿ ವರ್ತಿಸಿತು. ಹೀಗಾಗಿ ಸ್ವಾತಂತ್ರ ಭಾರತದಲ್ಲಿಯೂ ಶ್ರೀಸಾಮಾನ್ಯ ಶೋಷಣೆ ಮುಂದುವರೆಯಿತು. ಅಸಮಾನತೆಯ ಅಂತರ ಬೃಹದಾಕಾರವಾಗಿ ಬೆಳೆಯಿತು. “ನಾನ್ಯಾವ ಅಂಥ ದ್ರೋಹದ ಕೆಲ್ಸ, ಅದೂ ದೇಶ ದ್ರೋಹದ ಕೆಲ್ಸ ಮಾಡಿವ್ನಿ ಸಾರ್? ಖೋಟಾನೋಟು ಮಾಡಿ ಆರು ಅಂತಸ್ತಿನ ಮನೆ, ಎಂಟು ಬಸ್ಸು, ಹನ್ನೊಂದು ಲಾರಿ, ಒಂದೈದು ಲಕ್ಷ ರೂಪಾಯಿ ಕಾರು ತಕ್ಕೊಂಡಿವ್ನಾ? ಕಂಟ್ರಾಕ್ಟ್ ತಕ್ಕೊಂಡು ಕಟ್ಟಿದ ಒಂದೇ ವರ್ಷಕ್ಕೆ ಕುಸ್ಕೋವಂತೆ ಸೇತ್ವೆ, ಮನೆಕಟ್ಟೀವ್ನಾ? ಏನು ಹೇಳಿ, ನಾನು ದೇಶದ್ರೋಹದ ಕೆಲ್ಸ ಮಾಡಿರೋದು?”[10] ಎಂದು ಕೇಳುವ ಮಂಚನ ಪ್ರಶ್ನೆಗಳು ಸ್ವತಂತ್ರ ದೇಶದ ಭ್ರಷ್ಟ ವ್ಯವಸ್ಥೆಯನ್ನು ಚೊಕ್ಕವಾಗಿ ಹಿಡಿದಿಡುತ್ತದೆ. ಮಂಚ, ಮೇಷ್ಟರು, ಅವರ ವೃತ್ತಿಯಲ್ಲಿ ಪ್ರಾಮಾಣಿಕರಾದರೂ ಅವರನ್ನು ತುರ್ತುಪರಿಸ್ಥಿತಿಯ ಗುಂಡಿಕ್ಕಿ ಕೊಲ್ಲಲಾಯಿತು. ಇಂಥ ವ್ಯವಸ್ಥೆಯ ಚಿತ್ರಣವನ್ನು ರಾಮಣ್ಣನವರು ಮೃಗಾಲಯ ಮತ್ತು ಬಂಧೀಖಾನೆಯ ನಡುವೆ ಹೋಲಿಕೆಯನ್ನು ತರುವ ಮೂಲಕ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ.

“ಅಲ್ಲಪ್ಪಾ! ಬೇಕಾದ್ರೆ ಹುಲಿ, ಸಿಂಹ, ಕರಡಿ, ಚಿರತೆ, ತೋಳ ಅವುಗಳನ್ನು ಹಿಡೀಲಿ, ಈ ರೀತಿ ಕೂಡಿ ಹಾಕಲಿ ಇನ್ನೂ ಬೇಕಾದ್ರೆ ಆ ಆನೆಗಳನ್ನು ಹಿಡಿದು ಹಾಕಲಿ......ಆದ್ರೆ ಈ ನವಿಲು, ಮೊಲ, ಈ ಹಕ್ಕಿಗಳು, ಜಿಂಕೆಗಳು ಇವೆಲ್ಲಾನೂ

ಸುಮ್ನೆಯಿಡ್ದು ಕೂಡಾಕೋದು ಅಂದ್ರೆ ಯಾವ ನ್ಯಾಯ? ಎಂದು ಹುಡುಗ ಅಪ್ಪನಿಗೆ ಮರುಸವಾಲು ಎಸೆದು ಬಿಟ್ಟ."[11]

"ಒಂದು ಹುಡುಗನಿಗೆ ಬಿದ್ದ ಕನಸು", ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು, ಕತೆಗಳನ್ನು ಕುರಿತು ಟಿ.ಪಿ. ಅಶೋಕ ಅವರು "ಸಮಕಾಲೀನ ಭಾರತೀಯ ರಾಜಕಾರಣವನ್ನು ಸ್ವತಂತ್ರ ಭಾರತದಲ್ಲಿ ಬಡವರ ಪಾಡನ್ನು ಇಷ್ಟು ವ್ಯಂಗ್ಯವಾಗಿ ಚಿತ್ರಿಸಿರುವ ಕತೆಗಳು ನಮ್ಮಲ್ಲಿ ಹೆಚ್ಚಿಲ್ಲ. ಇವು ಉತ್ತಮ ಸಾಮಾಜಿಕ ವಿಮರ್ಶೆಯಾಗಿರುವಂತೆ ನಾಡಿನ ಸದ್ಯದ ಸ್ಥಿತಿಗೆ ಹಿಡಿದ ಪ್ರತೀಕಗಳೂ ಆಗಿವೆ. ತೀರ ಸಮಕಾಲೀನವಾಗಿರುವ ಈ ರಚನೆಗಳು ಕಥನಕಲೆಯಲ್ಲಿ ಸಾಧಿಸಿಕೊಂಡಿರುವ ಪರಿಣತಿಯನ್ನು ಗಮನಿಸಿದಾಗ ರಾಮಣ್ಣನವರ ಬರವಣಿಗೆಯ ಹೆಚ್ಚಳ ಪ್ರಾಮುಖ್ಯ ಅರ್ಥವಾಗುತ್ತದೆ."[12] ಎಂದಿದ್ದಾರೆ.

'ಭೂ ಸುಧಾರಣ ಕಾಯಿದೆ' ಇಡೀ ಭಾರತದಲ್ಲಿ ಎಂತೋ ಅಂತೆಯೇ ಕರ್ನಾಟಕದ ಗೇಣಿದಾರರ ಎದೆಯಲ್ಲು ಹೊಸ ಭರವಸೆಯನ್ನು ಮೂಡಿಸಿದ್ದಂತು ಸತ್ಯ. ಕರ್ನಾಟಕದ ಆಗಿನ ಮುಖ್ಯಮಂತ್ರಿಗಳಾಗಿದ್ದ ದೇವರಾಜ ಅರಸು ಅವರ ನೇತೃತ್ವದಲ್ಲಿ ಭೂಸುಧಾರಣಾ ಕಾನೂನು ಕಾರ್ಯರೂಪ ಪಡೆಯುವಲ್ಲಿ ಸ್ವಲ್ಪಮಟ್ಟಿಗೆ ಯಶಸ್ವಿಯಾಯಿತು. ಅಲ್ಲಿಯವರೆಗೆ ಕೃಷಿ ಕೂಲಿಗಳಾಗಿದ್ದ ಕೆಳಜಾತಿವರ್ಗದ ಜನರಿಗೆ ಭೂ ಒಡೆತನ ಸಿಕ್ಕಿ ಸ್ವಾಭಿಮಾನಿಗಳಾಗುವ ಸೂಚನೆಗಳು ಕಂಡು ಬಂದವು. ಅಸಂಖ್ಯಾತ ಗೇಣಿದಾರರು, ಜೀತದಾಳುಗಳು ಕೃಷಿಕರಾದ್ದರಿಂದ ಗಮನಾರ್ಹ ಬದಲಾವಣೆ ಕಂಡುಬಂದಿತು. ಈ ಎಲ್ಲ ಘಟನೆಗಳು ಕರ್ನಾಟಕದ ಸಾಂಸ್ಕೃತಿಕ ಮತ್ತು ಸಾಹಿತ್ಯದ ಕ್ಷೇತ್ರದಲ್ಲಿ ಒತ್ತಡವನ್ನು ಉಂಟುಮಾಡಿದವು. ಸಾಹಿತ್ಯವು ಜನತೆಯ ಹೋರಾಟಕ್ಕೂ ಸಂಪರ್ಕವೇರ್ಪಟ್ಟು, ಸಾಹಿತಿಗಳಿಗೆ ಜನತೆಯ ನಿಕಟ ಸಂಬಂಧ ಬೆಳೆಯಿತು.

ಉಳುವವನಿಗೆ ಭೂಮಿಯನ್ನು ಕೊಡುವುದರ ಮೂಲಕ ಶ್ರಮಿಕನನ್ನು ಭೂಮಾಲೀಕನನ್ನಾಗಿಸುವ ಉದ್ದೇಶ ಭೂಸುಧಾರಣೆ ಕಾನೂನಿನದ್ದಾಗಿದೆ. ಆದರೆ ಈ ಭೂಸುಧಾರಣಾ ಕಾನೂನನ್ನೆ ನಾಚಿಸುವಂತಹ ಕುತಂತ್ರಗಳು ನಡೆದಿರಬಹುದಾದ್ದನ್ನು 'ತಾಯಿ', 'ಚಲುವನ ಪರಂಗಿ ಗಿಡಗಳು' ಕತೆಗಳಲ್ಲಿ ರಾಮಣ್ಣನವರು ಚಿತ್ರಿಸಿದ್ದಾರೆ. ಜಮೀನ್ದಾರರು ತಮ್ಮ ಸ್ಥಾನವನ್ನು ಉಳಿಸಿಕೊಳ್ಳಲು ಅಧಿಕಾರಶಾಹಿಯನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡಿದ್ದನ್ನು ಮೇಲಿನ ಎರಡು ಕತೆಗಳು ಬಿಂಬಿಸುತ್ತವೆ.

'ಭೂ ಸುಧಾರಣೆ ಕಾಯ್ದೆ'ಯ ಹೆಸರಿನಲ್ಲಿ ವಿಧವೆ ಚನ್ನಮ್ಮನ ಎರಡು ಎಕರೆ ಜಮೀನನ್ನು ಲಪಟಾಯಿಸಲು ಸುಳ್ಳು ದಾಖಲೆ ನಿರ್ಮಿಸಿದ ಚಂದ್ರಶೆಟ್ಟಿಯ ಕುತಂತ್ರಗಳೆಲ್ಲ 'ತಾಯಿ' ಕತೆಯಲ್ಲಿ ಅನಾವರಣ ಗೊಂಡಿವೆ. ಕತೆಯ ಅಂತ್ಯ ಭಾವನಾತ್ಮಕ ಸನ್ನಿವೇಶದೊಂದಿಗೆ ಸುಖಾಂತ್ಯಗೊಂಡರೂ, ಕತೆಯಲ್ಲಿ ಸರ್ಕಾರಿ ಅಧಿಕಾರಿಗಳ ಭ್ರಷ್ಟಾಚಾರ ಹಿಡಿಯಾಗಿ ಮೂಡಿಬಂದಿದೆ. ಸರ್ಕಾರದ ಯೋಜನೆಗಳು ಸರ್ಕಾರಿ ಅಧಿಕಾರಿಗಳಿಂದಲೇ ವಿಫಲವಾಗುತ್ತಿರುವುದು ದುರಂತ. ಈ ಕಾರಣದಿಂದಲೇ ಮಹಮ್ಮದ್–ಬಿನ್–ತುಘಲಕ್‌ನ ಮಹತ್ವ ಪೂರ್ಣ ಯೋಜನೆಗಳಲ್ಲಿ ನೆಲಕಚ್ಚಿದವು.

"ಪುಟ್ಟರಾಜಪ್ಪ ಚಂದ್ರಪ್ಪಶೆಟ್ಟಿಯಿಂದ ಒಂದೂವರೆ ಸಾವಿರ ರೂಪಾಯಿ ಲಂಚತಿಂದು, ಸೇಕದಾರರಿಗೆ ಎರಡೂವರೆ ಕೊಡಿಸಿ, ಇನ್ನು ಸಂಬಂಧಪಟ್ಟವರಿಗೆ ಅವರ ಯೋಗ್ಯತಾನುಸಾರ–ಹಣ ನುಂಗುವವರಿಗೆ ಹಣ: ತೀರ್ಥ ಸಮಾರಾಧನೆಯಿಂದ ತೃಪ್ತರಾಗುವವರಿಗೆ ತೀರ್ಥ ಮುಂತಾದವನ್ನು ಸಮರ್ಪಿಸಿ, ಇದೇ ತಾಲ್ಲೂಕಿನ ಭೂನ್ಯಾಯ ಮಂಡಲಿಯನ್ನೇ ತನ್ನ ವಶೀಕರಣ ವಿದ್ಯೆಯ ಪ್ರಯೋಗದಿಂದ ತನ್ನ ಹತೋಟಿಗೆ ತೆಗೆದುಕೊಂಡು ಪಾಣಿಯನ್ನು ಎಂಟು ವರ್ಷಗಳ ಹಿಂದಿನವರೆಗೂ ಸೆಟ್ಟಿಯ ಹೆಸರಿಗೆ ಬರೆದು, ಕಳೆದ ಎಂಟು ವರ್ಷಗಳಿಂದ ಈಗಿನವರೆಗೂ ಚನ್ನಮ್ಮನ ಭೂಮಿಯನ್ನು ವ್ಯವಸಾಯ ಮಾಡಿಸುತ್ತಿರುವವನು ಚಂದ್ರಶೆಟ್ಟಿ ಎಂದು, ಚನ್ನಮ್ಮನು ಶೆಟ್ಟಿಯಿಂದ ಕೇವಲ ಗುತ್ತಿಗೆಯನ್ನು ಮಾತ್ರ

ಪಡೆಯುತ್ತಿರುವಳೆಂದೂ ಬಾಜೂದಾರರಾದ ಕೆಂಪಲಿಂಗೇಗೌಡ ಮತ್ತು ಅಬ್ದುಲ್ ವಹಾಬರಿಂದ ಹೇಳಿಕೆಯನ್ನು ಪಡೆದು ಲಗತ್ತಿಸಿ, ಚನ್ನಮ್ಮನ ಸಂಸಾರದ ಇತಿಶ್ರೀ ಮಾಡಲು ಆಗಲೇ ಸಿದ್ಧಪಡಿಸಿದ್ದ."[13]

ಉಳುವವನಿಗೆ ಭೂಮಿ ದೊರಕಿಸಲು ಹೊರಟಿರುವ ಕಾಯಿದೆಯ ಹೆಸರಿನಲ್ಲಿ ಗೇಣಿದಾರಳೊಬ್ಬಳನ್ನು ಒಕ್ಕಲೆಬ್ಬಿಸಲು ಹೊರಟಿರುವುದು ವ್ಯವಸ್ಥೆಯ ಕ್ರೌರ್ಯಕ್ಕೆ ಹಿಡಿದ ಸಂಕೇತವಾಗಿದೆ. ಪ್ರಸ್ತುತ ಕತೆಯಲ್ಲಿ ಎರಡು ತಲೆಮಾರುಗಳ ನಡುವಿನ ಮಾನವೀಯ ಮೌಲ್ಯಗಳ ಚಿತ್ರಣವನ್ನು ನೀಡಲಾಗಿದೆ. ತಾಯಿ ಉರುಗಮ್ಮನ ಮನಸ್ಥಿತಿಗೂ, ಮಗನಾದ ಪುಟ್ಟರಾಜಪ್ಪನ ಮನೋಭಾವಕ್ಕೂ ವ್ಯತ್ಯಾಸವಿದೆ. ಇದು ತಲೆಮಾರಿನಿಂದ ತಲೆಮಾರಿಗೆ ಬತ್ತುತ್ತಿರುವ ಮಾನವೀಯ ಮೌಲ್ಯಗಳ ಸೂಕ್ಷ್ಮವನ್ನು ತೆರೆದಿಡುತ್ತದೆ. ಕಲ್ಲುಬಿದ್ದ ಭೂಮಿಯಲ್ಲಿ ಗೇಣಿದಾರರು ಶ್ರಮಪಟ್ಟು ಬೆಳೆದ ಫಲವತ್ತಾದ ಬೆಳೆ ಕುತಂತ್ರದಿಂದಾಗಿ ಜಮೀನ್ದಾರನಾದ ಗೋವಿಂದಸ್ವಾಮಿಯ ಪಾಲಾದುದನ್ನು 'ಚಲುವನ ಪರಂಗಿ ಗಿಡಗಳು' ಕತೆಯಲ್ಲಿ ಕಾಣಬಹುದಾಗಿದೆ. ಭೂ ಸುಧಾರಣಾ ಕಾಯಿದೆಯಿಂದಾಗಿ ಗೇಣಿದಾರರು ಬಂಡೆದ್ದು ತಮ್ಮ ಹಕ್ಕುಗಳಿಗಾಗಿ ಹೋರಾಡದಂತೆ ಜಮೀನ್ದಾರ ಅವರ ತಲೆಯನ್ನು ನೇವರಿಸುತ್ತಾನೆ.

'ಒಂದು ಊರಿನಲ್ಲಿರುವ ನಾವು ಭೂ ಪಂಚಾಯಿತಿಗಳ ಮೆಟ್ಟಿಲು ಹತ್ತಿ ಗುದ್ದಾಡುವುದು ಬೇಡ. ನಾವೇ ಕುಳಿತುಕೊಂಡು ತೀರ್ಮಾನಮಾಡಿಕೊಳ್ಳುವ: ಉಳುವವನಿಗೆ ಭೂಮಿ ಎಂದು ಕಾನೂನು ಮಾಡಿರುವುದರಿಂದ ಹಾಗೂ ಸರ್ಕಾರ ಬಡವರ ಪರ ಇರುವಾಗ ನಮ್ಮಂಥವರ 'ಆಟ' ನಡೆಯೋದಿಲ್ಲ ಎಂದು ಎಲ್ಲರಿಗೂ ಸಿಹಿ ಮಾತುಗಳಿಂದ ಹಕ್ಕು ಚಲಾಯಿಸದಂತೆ ಲಗಾಮು ಹಾಕಿದ್ದರು. ಇದು ಜಮೀನ್ದಾರನ ಗೋಸುಂಬೆತನಕ್ಕೆ ಸಾಕ್ಷಿಯಾಗಿದೆ. ಗೇಣಿದಾರರನ್ನು ಒಂದು ಮಾತು ಕೇಳದೆ ಅವರ ಶ್ರಮದ ಬೆಳೆಯನ್ನು ಲಪಟಾಯಿಸಿದ ಗೋವಿಂದಸ್ವಾಮಿ ಅನ್ಯಾಯದ ಪರಮಾವಧಿಯಂತೆ ಕಂಡು ಬರುತ್ತಾನೆ. ಈ ಸಂದರ್ಭದಲ್ಲಿ ಗೇಣಿದಾರರಿಗೆ

ಅನ್ಯಾಯವಾಗಿರುವಂತೆ ಕಂಡುಬಂದರೂ ಅವರಲ್ಲಿ ಹೊಸ ಜಾಗೃತಿ ಮೂಡಿದುದಂತು ಸತ್ಯ. ತಮ್ಮ ನ್ಯಾಯಯುತ ಹಕ್ಕುಗಳಿಗಾಗಿ ಹೋರಾಡಲು ಹೆಜ್ಜೆ ಇಡುತ್ತಾರೆ.

"ಭೂನ್ಯಾಯ ಮಂಡಲಿಯ ಮುಂದೆ ಅರ್ಜಿಗಳು ಬಂದಾಗ, ಮೂಗೂರ ಮತ್ತು ಇತರ ಗೇಣಿದಾರರ ಪರವಾಗಿ ಪಕ್ಕದ ಜಮೀನಿನವರಾಗಲೀ, ಮತ್ಯಾರಾಗಲೀ ಸಾಕ್ಷಿ ಹೇಳಲು ಬಾರದೇ ಹೋದುದರಿಂದ, ಜಮೀನು ಗೋವಿಂದಸ್ವಾಮಿಗೆ ದಕ್ಕಿತು. ಮೂಗೂರ ಮತ್ತು ಅವನ ಬೆಂಬಲಿಗರೆಲ್ಲ ಸಭೆ ಸೇರಿ, ಭೂನ್ಯಾಯ ಮಂಡಲಿಯಲ್ಲಿ ತಮಗೆ ಅನ್ಯಾಯವಾಗಿರುವುದಾಗಿ, ಬಡಗೇಣಿದಾರರ ಹಿತಾಸಕ್ತಿಯನ್ನು ಕಾಯಲು ಸರ್ಕಾರ ನೇಮಿಸಿರುವ ವಕೀಲರನ್ನು ಬೆಂಗಳೂರಿನಲ್ಲಿ ಕಂಡು ಎಲ್ಲವನ್ನು ಅವರಿಗೆ ವಿವರಿಸಿ: ಭೂನ್ಯಾಯ ಮಂಡಲಿಯ ತೀರ್ಪಿನ ವಿರುದ್ಧ ಹೈಕೋರ್ಟ್‌ಗೆ ಅಪೀಲು ಹಾಕಿಸಬೇಕೆಂದು ತೀರ್ಮಾನಿಸಿದರು"[15]

ಒಟ್ಟಾರೆ ರಾಮಣ್ಣನವರಿಗೆ ತಾವು ಹುಟ್ಟಿದ ದೇಶದ ಬಗೆಗೆ ಅಭಿಮಾನವಿದೆ. ಭಾರತ ಯಾವ ತಪ್ಪನ್ನು ಮಾಡದಿದ್ದರೂ ಚೀನಾ ಮತ್ತು ಪಾಕಿಸ್ತಾನಗಳು ತಮ್ಮ ದುರಾಶೆ, ಸೇಡಿನಿಂದಾಗಿ ಅದರ ಮೇಲೆ ಯುದ್ಧವನ್ನು ಸಾರಿದಾಗ ಇಂಥ ಗೊಡ್ಡು ಸವಾಲುಗಳಿಗೆ ತಾವು ಎದುರುವುದಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತಾರೆ. ಹಳ್ಳಿಗರು ತಾವು ಬಡತನದಲ್ಲಿ ಬೇಯುತ್ತಿದ್ದರೂ ಅವರು ರಾಷ್ಟ್ರದ ರಕ್ಷಣೆಗೆ ನೀಡುವ ಧನ ಸಹಾಯದ ಮೂಲಕ ಅದು ವ್ಯಕ್ತವಾಗುತ್ತದೆ. ಎಪ್ಪತ್ತರ ದಶಕದಲ್ಲಿ ಜಾರಿಗೆ ಬಂದ ಭೂಸುಧಾರಣಾ ಕಾಯಿದೆಯ ಹಿನ್ನಲೆಯಲ್ಲಿ ನಡೆದ ಕುತಂತ್ರಗಳನ್ನು ಬೆತ್ತಲಗೊಳಿಸುತ್ತಾರೆ. ಅದೇ ರೀತಿ ತುರ್ತು ಪರಿಸ್ಥಿತಿಯ ನೆಪದಲ್ಲಿ ವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕಿದ ಸರ್ಕಾರದ ಕ್ರಮವನ್ನು ಖಂಡಿಸುತ್ತಾರೆ. ಹೀಗೆ ರಾಮಣ್ಣನವರು ತಮ್ಮ ಸಮಕಾಲೀನದಲ್ಲಿ ನಡೆಯುವ ಮಹತ್ವ ಪೂರ್ಣ ಘಟನೆಗಳಿಗೆ ಸ್ಪಂದಿಸುವ ಮೂಲಕ ತಾವು ಚಲನಶೀಲ ಲೇಖಕರೆಂಬುದನ್ನು ಸಾಬೀತು ಪಡಿಸಿದ್ದಾರೆ.

'ಭಾರತ ಬಡಜನರಿಂದ ಕೂಡಿದ ಶ್ರೀಮಂತ ರಾಷ್ಟ್ರ' ಎಂದು ಹಲವಾರು ವರ್ಷಗಳಿಂದಲೂ ಹೇಳುತ್ತಲೇ ಇದ್ದೇವೆ. ಇದಕ್ಕೆ ಜನಸಂಖ್ಯೆ, ತಾಂತ್ರಿಕತೆಗಳು ಮಾತ್ರ ಕಾರಣವಲ್ಲ. ಭಾರತದಲ್ಲಿರುವ ಅಸಮಾನತೆಯು ಪ್ರಮುಖ ಕಾರಣ. ಒಂದು ಹೊತ್ತಿನ ಗಂಜಿಗೂ ಪರದಾಡುತ್ತಿರುವ ಜನರಿರುವ ಈ ನೆಲದಲ್ಲಿಯೇ ಲಕ್ಷಾಂತರ ಕೋಟಿಗಳ ವಾರಸುದಾರರಿದ್ದಾರೆ. ನಗರಗಳು ದಿನದಿಂದ ದಿನಕ್ಕೆ ಬೃಹದಾಕಾರವಾಗಿ ಬೆಳೆಯುತ್ತಿದ್ದರೆ ಹಳ್ಳಿಗಳು ಕೊರತೆಗಳ ಬಾರದಲ್ಲಿ ನಲುಗುತ್ತಿವೆ. ಸರಿಯಾದ ರಸ್ತೆಗಳಿಲ್ಲದೆ, ಕುಡಿಯುವ ನೀರಿಲ್ಲದೆ, ಸೂರಿಲ್ಲದೆ ಗ್ರಾಮೀಣ ಜನತೆ ಪರದಾಡುತ್ತಿದ್ದಾರೆ. ರೈತ ಬೆಳೆದ ಬೆಳೆಗೆ ಸರಿಯಾದ ಬೆಲೆ ಸಿಗದೆ ಆತ 'ಸಾಲದಲ್ಲಿಯೇ ಹುಟ್ಟಿ ಸಾಲದಲ್ಲಿಯೇ ಬೆಳೆದು ಸಾಲದಲ್ಲಿಯೇ ಸಾಯುವಂತಾಗಿದೆ'. ಆ ಮೂಲಕ 'ವ್ಯವಸಾಯ ಎಂದರೆ ನಾ ಸಾಯ ನೀ ಸಾಯ ಮನೆ ಮಂದಿಯೆಲ್ಲಾ ಸಾಯ' ಎಂಬ ಮಾತು ಅರ್ಥಪೂರ್ಣವಾಗುತ್ತಿದೆ. "ಸಮಾಜವಾದಿ ಚಿಂತಕ ಡಾ. ರಾಮಮನೋಹರ ಲೋಹಿಯಾ ಒಂದು ಕಡೆ ಹೀಗೆ ಹೇಳುತ್ತಾರೆ. "ಸ್ವಾತಂತ್ರ್ಯ ಹೋರಾಟಕ್ಕೆ ಚರಕ ಸ್ಫೂರ್ತಿ ಶಕ್ತಿಯಾಗಿ ಕೆಲಸ ಮಾಡಿದಂತೆ ಸ್ವತಂತ್ರ ಭಾರತಕ್ಕೆ ಗುದ್ದಲಿ ಪ್ರೇರಕ ಶಕ್ತಿಯಾಗಬೇಕು" ಈ ಹೇಳಿಕೆಯಲ್ಲಿ ಸ್ವತಂತ್ರ ಭಾರತದಲ್ಲಿ ಆಗ ಬೇಕಿರುವ ರಚನಾತ್ಮಕ ಕೆಲಸದಲ್ಲಿ ಗುದ್ದಲಿಯ ಪಾತ್ರವನ್ನು ಗುರುತಿಸಿದ್ದಾರೆ. ಲೋಹಿಯಾ ನಿಜವಾದ ಭಾರತದ ಹೃದಯವನ್ನು ಅರ್ಥಮಾಡಿಕೊಳ್ಳಬಲ್ಲವರಾಗಿದ್ದರು. ಭೋಗಲಾಲಸೆಯ ನಗರಗಳನ್ನು ಕಟ್ಟುವುದರಿಂದ ದೇಶದ ಅಭಿವೃದ್ಧಿ ಸಾಧ್ಯವಾಗದೆಂದೂ ದೇಶ ಉದ್ಧಾರವಾಗಬೇಕಾದರೆ ಭಾರತದ ಗ್ರಾಮೀಣ ಬದುಕು ಕ್ರಿಯಾಶೀಲವೂ ಪ್ರಮುಖವೂ ಆಗಬೇಕೆಂದು ತಿಳಿದಿದ್ದರು. ದೇಶದ ಉದ್ಧಾರ ಗ್ರಾಮ ಭಾರತದಲ್ಲಿ ಅರ್ಥಾತ್ ರೈತನ ಬದುಕು ಹಸನಾಗುವುದರಲ್ಲಿದೆ ಎಂಬ ಸತ್ಯದ ಅರಿವು ಅವರಿಗಿತ್ತು. ಆದರೆ ಸ್ವತಂತ್ರ ಭಾರತದಲ್ಲಿ ನಗರಗಳು ಬೆಳೆದವು: ಗ್ರಾಮಗಳು ನಿರ್ಲಕ್ಷ್ಯಕ್ಕೊಳಗಾದವು. ಸ್ವತಂತ್ರ ಪೂರ್ವ ಭಾರತದಲ್ಲಿ ಕಂಡಿದ್ದ ಗ್ರಾಮ ಸ್ವರಾಜ್ಯದ ಕನಸುಗಳು ಕಣ್ಮುಂದೆಯೇ ಅಲುಗಾಡತೊಡಗಿದವು."[16]

'ಜನರಿಂದ, ಜನರಿಗಾಗಿ, ಜನರಿಗೋಸ್ಕರ ನಡೆಸಲ್ಪಡುವ ಸರ್ಕಾರವೇ ಪ್ರಜಾಪ್ರಭುತ್ವ' ಎಂದು ಹೇಳಿದ ಅಬ್ರಹಾಂ ಲಿಂಕನ್ನನ ವ್ಯಾಖ್ಯೆ ಸ್ವತಂತ್ರ ಭಾರತದಲ್ಲಿ ಬದಲಾಯಿತು. ಆಡಳಿತ ವ್ಯವಸ್ಥೆ ಭ್ರಷ್ಟಾಚಾರಗಳ ಗಾಣವಾಯಿತು. ಇದಕ್ಕೆ ಸಿಕ್ಕಿದ ಗ್ರಾಮೀಣ ಬಡ ಮುಗ್ಧ ಜನತೆ ವಿಲಿವಿಲಿ ಎಂದು ಒದ್ದಾಡುವಂತಾಯಿತು. ಪೋಲೀಸರು, ಸರ್ಕಾರಿ ವೈದ್ಯರು, ಚುನಾಯಿತ ಪ್ರತಿನಿಧಿಗಳು, ಹೀಗೆ ಪ್ರಜಾಪ್ರಭುತ್ವ ವ್ಯವಸ್ಥೆಯ ಕಾವಲುಗಾರರೆ ಬೇಲಿಯೇ ಎದ್ದು ಹೊಲ ಮೇದಂತೆ ಗ್ರಾಮೀಣ ಬಡಜನತೆಯನ್ನು ಶೋಷಿಸಲಾರಂಭಿಸಿದರು. ಅದರಲ್ಲೂ ಸೇವಾಕ್ಷೇತ್ರಗಳಾಬೇಕಿದ್ದ ಸರ್ಕಾರಿ ಆರೋಗ್ಯ ಕೇಂದ್ರಗಳು ಸುಲಿಗೆಯಲ್ಲಿ ತೊಡಗಿದಾಗ ಬಡಜನತೆಯ ಪಾಡು ಹೇಳತೀರದು. ವೈದ್ಯರೇ ಧನಪಿಶಾಚಿಗಳಾದಾಗ ಉದ್ಭವಿಸುವ ಕ್ರೂರ ವಾತಾವರಣವನ್ನು ರಾಮಣ್ಣನವರ ಕತೆಗಳು ಬಿಂಬಿಸುತ್ತವೆ. ಈ ನಿಟ್ಟಿನಲ್ಲಿ ರಾಮಣ್ಣನವರ 'ಗಾಂಧಿ', 'ಸಂತೆಯೊಳಗೊಂದು ಮನೆಯ ಮಾಡಿ', 'ಕರುಣಾಳು ಬಾ ಬೆಳಕೆ' ಕತೆಗಳು ಪರಿಶೀಲನಾರ್ಹವಾಗಿವೆ.

'ಗಾಂಧಿ' ಭಾರತದ ಸ್ವತಂತ್ರ್ಯಕ್ಕಾಗಿ ಹೋರಾಡಿದ ಈ ದೇಶದ ದೊಡ್ಡಶಕ್ತಿ. ಸ್ವತಂತ್ರ ಭಾರತದಲ್ಲಿ ಗ್ರಾಮಗಳು ಉದ್ಧಾರವಾಗಬೇಕು, ಹರಿಜನರು ಶೋಷಣೆಯಿಂದ ಮುಕ್ತರಾಗಬೇಕು, ಸತ್ಯ, ಅಹಿಂಸೆ, ಸತ್ಯಾಗ್ರಹಗಳು ಈ ದೇಶದ ಉಸಿರಾಗಬೇಕು ಒಟ್ಟಾರೆ ರಾಮ ರಾಜ್ಯದ ಕನಸು ನನಸಾಗಬೇಕು ಎಂಬುದು ಗಾಂಧೀಜಿಯವರ ಆಶಯವಾಗಿತ್ತು. ಆದರೆ ಪ್ರಜಾಪ್ರಭುತ್ವ ಭಾರತದಲ್ಲಿ ನಡೆಯುತ್ತಿರುವ ವಿದ್ಯಮಾನಗಳು ಗಾಂಧೀಜಿಯ ಆದರ್ಶ, ತತ್ವಗಳಿಗೆ ವಿರುದ್ಧವಾದವುಗಳು. ಬಹುಶಃ ಗಾಂಧೀಜಿಯನ್ನು ಗೋಡ್ಸೆ ಒಂದು ಬಾರಿ ಮಾತ್ರ ಕೊಂದರೆ ಅವರ ತತ್ವಗಳನ್ನು ಭಾರತೀಯರು ನಿತ್ಯವೂ ಕೊಲ್ಲುತ್ತಿದ್ದಾರೆ ಎಂಬ ಸತ್ಯವನ್ನು ರಾಮಣ್ಣನವರ 'ಗಾಂಧಿ' ಕತೆ ಧ್ವನಿಪೂರ್ಣವಾಗಿ ಚಿತ್ರಿಸುತ್ತದೆ. ಸ್ವತಂತ್ರ

ಭಾರತದಲ್ಲಿ 'ಗಾಂಧಿ' ಎಂಬ ಹೆಸರು ನಗೆ ಪಾಟಲಿಗೀಡಾದ ಗಂಭೀರ ವಿಷಯವನ್ನು ಹೇಳುತ್ತಲೇ ಲೇಖಕರು ಹಳ್ಳಿಗಾಡಿನ ಜನ ಬಡತನದ ಕುಲುಮೆಯಲ್ಲಿ ಬೇಯುತ್ತಿರುವ ಚಿತ್ರವನ್ನು ಯಾವ ಅಬ್ಬರವಿಲ್ಲದೆ ಕಟ್ಟಿಕೊಡುತ್ತಾರೆ.

ಈ ಕತೆಯಲ್ಲಿ ಬರುವ ಹದಿನೈದು ವರ್ಷದ ಹುಡುಗ ತೀವ್ರಕಾಯಿಲೆಗೆ ತುತ್ತಾಗಿ ತನ್ನ ತಾಯಿಯೊಡನೆ ಸರ್ಕಾರಿ ಆರೋಗ್ಯ ಕೇಂದ್ರಕ್ಕೆ ಬರುತ್ತಾನೆ. ಇನ್ನು ಆಡಿ ನಲಿಯಬೇಕಾದ ವಯಸ್ಸಿನಲ್ಲಿ ಆ ಹುಡುಗನಿಗೆ ಪ್ರಪಂಚದ ಮೇಲೆ ಒಂದು ರೀತಿಯ ಜಿಗುಪ್ಸೆ ಹುಟ್ಟಿದೆ.

"ನಾನು ಇದ್ದರೆಷ್ಟು, ಸತ್ತರೆಷ್ಟು ನಡಿಯವ್ವಾ ಊರಿಗೆ ಹೋಗುವಾ"[17]

"ಇದ್ದು ನಾನು ಯಾವ ರಾಜ್ಯ ಆಳಬೇಕು"[18]

"ಸುಳ್ಳು ಹೇಳಿ ನಿಮ್ ತಾವು ನಾನು ಯಾವ ಸಾಮ್ರಾಜ್ಯ ಈಸ್ಕೋಬೇಕು"[19] ಎಂಬ ಮಾತುಗಳು ಆ ವಯಸ್ಸಿಗೆ ಮೀರಿದ ನೋವಿನ ಅನುಭವದಿಂದ ಬಂದವುಗಳಾಗಿವೆ. ಬೆಳಿಗ್ಗೆಯಿಂದ ಮದ್ಯಾಹ್ನದವರೆಗೂ ಕಾಯುತ್ತ ಕುಳಿತ ತಾಯಿ, ಮಗನನ್ನು ಯಾರೂ ವಿಚಾರಿಸದೆ ಇದ್ದಾಗ ಆಕೆ ಹೇಳುವ "ಇಲ್ಲಿ ನನ್ನ ನಿನ್ನ ರಾಗವ ಯಾರು ಕೇಳಾರು?"[20] ಎಂಬ ಮಾತು 'ಬಡವನ ಕೋಪ ದವಡೆಗೆ ಮೂಲ' ಎಂಬ ಗಾದೆಯ ಅರ್ಥವನ್ನು ಧ್ವನಿಸುತ್ತದೆ. ಇನ್ನು ಆ ಹುಡುಗ ತನ್ನ ಹೆಸರು 'ಗಾಂಧಿ'ಎಂದು ಹೇಳಿದಾಗ ನಗೆಪಾಟಲಿಗೆ ಗುರಿಯಾಗುವುದು ಸ್ವತಂತ್ರ ಭಾರತದಲ್ಲಿ ಗಾಂಧೀಜಿಗೆ ಸಿಕ್ಕ ಸ್ಥಾನಮಾನವನ್ನು ಸಂಕೇತಿಸುತ್ತದೆ. ಯಾವುದೇ ಒಬ್ಬ ವ್ಯಕ್ತಿ ತನ್ನ ಪಾಡಿಗೆ ತಾನಿದ್ದು, ಯಾವುದೇ ದುರಭ್ಯಾಸಗಳನ್ನು ಕಲಿಯದಿದ್ದರೆ ಆತನನ್ನು 'ಗಾಂಧಿ' ಎಂದು ಚುಡಾಯಿಸುವುದು ಇಂದು ಸರ್ವೇಸಾಮಾನ್ಯವಾಗಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ. ಗಾಯದ ಮೇಲೆ ಬರೆ ಎಳೆದಂತೆ ಗಾಂಧಿಗೆ ದೊಡ್ಡ ಕಾಯಿಲೆಯೇ ಬಂದಿರುತ್ತದೆ. "ಮಗಳು ವೈದ್ಯರು ಬರೆದುಕೊಟ್ಟ

ಚೀಟಿಯನ್ನು ಕೊಟ್ಟು ಗಾಂಧಿಯನ್ನು 'ದೊಡ್ಡಾಸ್ಪತ್ರೆಗೆ' ಸೇರಿಸಬೇಕಂತೆ ಎಂದು ಹೇಳಿದಾಗ ಕರಿಸಿದ್ದೇಗೌಡನಿಗೆ ಎದೆ ಧಸಕ್ಕೆಂದಿತು"[21]

ಮಾರನೇ ದಿನ ಇಡೀ ಸಂಸಾರವೇ ದೊಡ್ಡಾಸ್ಪತ್ರೆಗೆ ಪ್ರಯಾಣಬೆಳೆಸಿ ಕ್ಯೂನಲ್ಲಿ ನಿಂತು ವೈದ್ಯರ ಬಳಿಗೆ ಹೋದಾಗ ಅಲ್ಲಿಯೂ ಮಹಾತ್ಮಗಾಂಧಿಯ ಹೆಸರು ನಗೆಪಾಟಲಿನ ವಸ್ತುವಾಗುತ್ತದೆ. ಹೃದಯ ಮತ್ತು ಮೂತ್ರಪಿಂಡಗಳ ಕಾಯಿಲೆ ಇರುವ ಗಾಂಧಿಗೆ ಔಷಧಿಯನ್ನು ತಂದು ಕೊಡುವ ಸಲುವಾಗಿ ಕರಿಸಿದ್ದೇಗೌಡ ಮಗಳು ಮತ್ತು ಮೊಮ್ಮಗಳ ಕಿವಿಯ ಓಲೆಗಳನ್ನು ಪಡೆದು ಊರಿಗೆ ಬರುತ್ತಾನೆ. ಒಡವೆಗಳನ್ನು ಯಾರೂ ಅಡವಿರಿಸಿಕೊಳ್ಳದಿದ್ದಾಗ ತನ್ನಲ್ಲಿದ್ದ ಹಲಸಿನ ಮರವನ್ನು ಇನ್ನೂರ ಐವತ್ತು ರೂಪಾಯಿಗೆ ಮಾರುತ್ತಾನೆ. ತಾನು ಸತ್ತರೆ ತನ್ನ ದೇಹವನ್ನು ಹಲಸಿನ ಬುಡದಲ್ಲಿ ಹಾಕಬೇಕು ಎಂದು ಕೇಳಿಕೊಂಡಿದ್ದ ಗಾಂಧಿಯ ಔಷಧಿಯನ್ನು ತರಲು ಹಲಸಿನ ಮರವನ್ನು ಮಾರಬೇಕಾದುದು ವಿಪರ್ಯಾಸ. ಹಾಗೆ ತಂದ ಔಷಧಿಯೂ ಗಾಂಧಿಗೆ ಸಿಕ್ಕಲಿಲ್ಲ ಎಂಬುದು ದುರಂತ.

"ಗಾಂಧಿ ಎಂಬ ಈ ಕತೆಯ ಧ್ವನಿ ಬಹಳ ಗಟ್ಟಿಯಾದದ್ದು. ಹಳ್ಳಿಗಾಡಿನ ಶೂದ್ರ ಜನಾಂಗದಲ್ಲಿನ ಬಡವರ ನಿರ್ಗತಿಕರ ಬಾಳನ್ನು ಅಸಹಾಯಕತೆಯನ್ನು, ರೋಗ ರುಜಿನಗಳಿಂದ ಬಳಲುತ್ತಿರುವುದನ್ನು ರಾಮಣ್ಣನವರು ಸಾಂಕೇತಿಕವಾಗಿ, ಧ್ವನಿಪೂರ್ಣವಾಗಿ ಹೇಳಿದ್ದಾರೆ. ಕನ್ನಡದ ಅತ್ಯುತ್ತಮ ಬಂಡಾಯ ಕತೆಗಳಲ್ಲಿ 'ಗಾಂಧಿ' ಮೊದಲ ಸಾಲಿನಲ್ಲಿ ನಿಲ್ಲುತ್ತದೆ. ತಮ್ಮದೇ ವೃತ್ತಿಯ ಹೊಣೆಗೇಡಿತನವನ್ನು ಅದು ಅರಾಜಕ ಸ್ಥಿತಿಯಲ್ಲಿ ಭಾರತದಲ್ಲಿ ನಡೆಯುತ್ತಿರುವುದನ್ನು ಮುಚ್ಚುಮರೆಯಿಲ್ಲದೆ, ಓದುಗರ ಮನಸ್ಸನ್ನು ಸೂರೆಗೊಳ್ಳುವಂತೆ ಶಕ್ತಿಶಾಲಿಯಾಗಿ ರಾಮಣ್ಣನವರು ಇಲ್ಲಿ ಕತೆಯಾಗಿಸಿದ್ದಾರೆ. ನಮ್ಮ ಜಾನಪದ ತ್ರಿಪದಿಗಳಲ್ಲಿ ಬರುವ,

ಬಡವರು ಸತ್ತರೆ ಸುಡಲಿಕ್ಕೆ ಸೌದಿಲ್ಲೊ
ಒಡಲ ಬೆಂಕಿಲಿ ಹೆಣ ಬೆಂದೋ। ದೇವರೇ
ಬಡವರಿಗೆ ಸಾವ ಕೊಡಬ್ಯಾಡೋ.

ಎಂಬ ಸಾಲುಗಳ ವ್ಯಾಖ್ಯಾನವನ್ನು ರಾಮಣ್ಣನವರು ಕತೆಯ ರೂಪದಲ್ಲಿ ಕೊಟ್ಟಿದ್ದಾರೆ. ಇವರ ಬಂಡಾಯ ಸಮುಷ್ಟಿಯನ್ನು ಒಳಗೊಳ್ಳಲು ಹವಣಿಸುತ್ತಿರುವುದಕ್ಕೆ ಸಾಕ್ಷಿಯಾಗಿ 'ಗಾಂಧಿ' ಕತೆ ನಮ್ಮ ಮುಂದೆ ನಡೆಯುತ್ತಿದೆ. ಇಂದಿಗೂ ಈ ಬಡಹುಡುಗ ಗಾಂಧಿಗೆ ಸಿಕ್ಕಿದ ಉಪಚಾರವೇ ನಮ್ಮ ಅಸಂಖ್ಯಾತ ಹಳ್ಳಿಗಾಡಿನ ಜನರಿಗೆ ಸಿಗುತ್ತಿರುವುದು ಈ ನಾಡಿನ ದೌರ್ಭಾಗ್ಯವೇ ಸರಿ"[22]

'ಗಾಂಧಿ' ಈ ದೇಶದ ಬಹುದೊಡ್ಡ ಹೆಸರು. ಅಂತೆಯೇ ಈ ಕತೆಯಲ್ಲಿ ಬರುವ 'ಗಾಂಧಿ' ಬಡರೈತರ ಸಂಕೇತ. ಹೀಗಾಗಿ ಗಾಂಧೀಜಿಕಟ್ಟಬಯಸಿದ ರಾಮರಾಜ್ಯದ ಕನಸನ್ನೆ ಈ ಕತೆ ವಾಸ್ತವತಾನೆಲೆಯಲ್ಲಿ ವಿಡಂಬಿಸಿರುವಂತೆ ತೋರುತ್ತದೆ. ಸರ್ಕಾರದ ಸಾವಿರಾರು ಎಕರೆ ಪಾಳು ಬಿದ್ದಿರುವ, ನೂರಾರು ಎಕರೆ ಜಮೀನು ಹೊಂದಿರುವ ಜಮೀನ್ದಾರರುಗಳಿರುವ ಈ ದೇಶದಲ್ಲಿ ಸರ್ಕಾರ ಕರೀಸಿದ್ದೇಗೌಡನ ಒಂದು ಎಕರೆ ಹೊಲವನ್ನು ವಶಪಡಿಸಿಕೊಂಡಿದ್ದು ಮಾತ್ರ ದುರದೃಷ್ಟಕರ. ಅದರಲ್ಲೂ ಬಡವರಿಗೆ ಮನೆಕಟ್ಟಿಕೊಳ್ಳಲೆಂದು ಹಂಚುವುದಕ್ಕಾಗಿ ವಶಪಡಿಸಿಕೊಂಡಿರುವುದಂತು ದುರಂತದ ಆಳವನ್ನು ಹೆಚ್ಚಿಸುತ್ತದೆ. ಇನ್ನು ಸರ್ಕಾರಿ ಆಸ್ಪತ್ರೆಗಳನ್ನು ಕಟ್ಟಿರುವ ಉದ್ದೇಶಕ್ಕೂ, ಅವು ನಡೆದುಕೊಳ್ಳುತ್ತಿರುವ ನಡವಳಿಕೆಗೂ ಯಾವ ರೀತಿಯ ಸಂಬಂಧವೂ ಇಲ್ಲ. ಹೀಗೆ ಬಡವರು ಬ್ರಿಟಿಷರ ನಿರಂಕುಶ ಆಳ್ವಿಕೆಯಿಂದ ಬಿಡುಗಡೆ ಹೊಂದಿ ಪ್ರಜಾವ್ಯವಸ್ಥೆಯ ಕಾನೂನಿನ ಕೆಳಗೆ ನರಳುವಂತಾದದ್ದು ಮಾತ್ರ ಈ ದೇಶದ ದುರಂತ.

'ಗಾಂಧಿ'ಕತೆ ಧ್ವನಿಪೂರ್ಣವಾಗಿ ಮೂಡಿಬಂದಿದ್ದರೂ ಓದುಗರಲ್ಲಿ ಕೆಲವು ಸಮಸ್ಯೆಗಳನ್ನು ಹುಟ್ಟು ಹಾಕುತ್ತದೆ. ಕರಿಸಿದ್ದೇಗೌಡ ತೆಗೆದುಕೊಂಡು ಹೋದ ಒಡವೆಗಳನ್ನು ಯಾರೂ ಗಿರಿವಿ ಇಟ್ಟುಕೊಳ್ಳದಿರಲು ಕಾರಣವೇನು? ಸರ್ಕಾರ

ಸ್ವಾಧೀನಪಡಿಸಿಕೊಂಡಿರುವ ಜಮೀನಿನಲ್ಲಿರುವ ಹಲಸಿನ ಮರವನ್ನು ಮೊದಲೇ ಮಾರ ಬಹುದಾಗಿತ್ತಲ್ಲ? ಎಂಬ ಪ್ರಶ್ನೆಗಳಿಗೆ ಕತೆಯಲ್ಲಿ ಸಮರ್ಥವಾದ ಉತ್ತರ ದೊರೆಯುವುದಿಲ್ಲ.

ಬೆಸಗರಹಳ್ಳಿ ರಾಮಣ್ಣನವರು ಒಬ್ಬ ಹೃದಯವಂತ ಕತೆಗಾರರಾಗಿರುವುದರಿಂದ ಸಾಮಾಜಿಕ ಕ್ರೌರ್ಯಗಳನ್ನು ಮತ್ತೆ ಮತ್ತೆ ಬಗೆದು ತೋರಿಸುತ್ತಾರೆ. ಒಂದೇ ನೆಲದಲ್ಲಿ ಏಕಿಷ್ಟು ಅನ್ಯಾಯ, ತಾರತಮ್ಯ ನಡೆಯುತ್ತಿದೆ ಎಂಬ ಪ್ರಶ್ನೆ ಅವರನ್ನು ಪುನಃ ಪುನಃ ಕಾಡುತ್ತದೆ. ಭಾರತದ ಬಡತನ, ಹಸಿವುಗಳಿಗೆ ಇಲ್ಲಿಯ ಜಾತೀಯತೆ ಭ್ರಷ್ಟತೆ, ಗೋಮುಖವ್ಯಾಘ್ರ ರಾಜಕಾರಣವೇ ಕಾರಣ ಎಂದು ಚಡಪಡಿಸುತ್ತಾರೆ. 'ಸಂತೆಯೊಳಗೊಂದು ಮನೆಯ ಮಾಡಿ' ಕತೆ ದಲಿತನ ಮೇಲೆ ನಡೆಯುವ ಸಾಮಾಜಿಕ ಅನ್ಯಾಯಗಳನ್ನು ಎಳೆಎಳೆಯಾಗಿ ಬಿಚ್ಚಿಡುತ್ತದೆ. ದಲಿತನಾದ ಬಿಸಿಲನ ಮೇಲೆ ಸವರ್ಣೀಯರು, ಸಾಮಾನ್ಯರು, ಪೋಲೀಸರು ಮತ್ತು ದೈವ ಏಕಕಾಲದಲ್ಲಿ ವಿರೋಧಿಗಳಾಗಿರುವ ಅಂಶ ಕಂಡು ಬರುತ್ತದೆ. ಕತೆಯ ಆರಂಭದಲ್ಲಿಯೇ ಬಿಸಿಲನ ಕುಟುಂಬದ ಬಡತನದ ಕರಾಳತೆಯ ರೂಪದ ದರ್ಶನವಾಗುತ್ತದೆ.

"ಅರಸಿಗೆ ಅನ್ನ ಮಾಡಲು ತನ್ನ ಅವ್ವ ನಡೆಸಿದ ಸಿದ್ಧತೆಗಳೆಲ್ಲವನ್ನು ಕಣ್ಣಾರೆ ಕಂಡು ಖುಷಿಯಾಗಿ ಹೋಗಿದ್ದಳು. ಅನ್ನದ ಮಡಕೆಯಿಂದ ಹೊರಟ ಕಂಪನ್ನು ಹೀರಿ ಹೀರಿ ಆರು ವರ್ಷದ ಜೀವ ಅಪೂರ್ವ ಆನಂದವನ್ನು ಅನುಭವಿಸುತ್ತಿದ್ದಾಗ ತನ್ನನ್ನು ಹೆತ್ತವಳ ಗದರಿಕೆಯಿಂದ ಉತ್ಸಾಹ ಭಂಗವಾಗಿ ಮುಖ ಊದಿಸಿಕೊಂಡು, ಕಣ್ಣಲ್ಲಿ ನೀರು ತುಂಬಿಕೊಂಡು ತನ್ನ ಅವ್ವನ ಕಣ್ಣುಗಳ ಕಡೆಯೇ ರೆಪ್ಪೆ ಉಯ್ಯದೆ ನೋಡಿದಳು. ಅವ್ವನ ಕಣ್ಣುಗಳಲ್ಲಿ ಬಂಗಾರದ ಗಣಿಯನ್ನೋ ಅಥವಾ ಅನ್ನದ ರಾಶಿಯನ್ನೋ ಕಂಡವಳಂತೆ ಇನ್ನೂ ನೆಟ್ಟ ನೋಟದಿಂದ ನೋಡಿದಳು: ಅವ್ವನ ಕಣ್ಣು ಗುಳ್ಳೆಗಳಲ್ಲಿ ಉರಿಯುವ ಒಲೆ; ಅದರ ಮೇಲೆ ಕುದಿಯುತ್ತ ಮೂಗಿಗೆ ಹಿತವಾದ ಕಂಪನ್ನು ಚೆಲ್ಲುತ್ತಿರುವ ಅನ್ನದ ಮಡಿಕೆ!"[23]

ಇದು ಭಾರತದ ಕೋಟ್ಯಾಂತರ ಬಡಮಕ್ಕಳ ದಿನನಿತ್ಯದ ಸಮಸ್ಯೆಯಾಗಿದೆ. ನಮ್ಮದು ಕೃಷಿ ಪ್ರಧಾನ ರಾಷ್ಟ್ರವಾಗಿದ್ದರೂ ಹಸಿವಿನ ಪ್ರಮಾಣವು ಹೆಚ್ಚಾಗಿರುವುದು ವಿಪರ್ಯಾಸವಾಗಿದೆ.

ಉಪ್ಪುತರಲು ಅಂಗಡಿಗೆ ಹೋಗಿದ್ದ ರಾಜನಿಗೆ ಸೈಕಲ್ ಸವಾರನೊಬ್ಬ ಡಿಕ್ಕಿ ಹೊಡೆಯುತ್ತಾನೆ. ಕೆಳಗೆ ಬಿದ್ದ ರಾಜನ ತಲೆ ಕಲ್ಲಿಗೆ ಹೊಡೆದು ರಕ್ತ ಸುರಿಯಲಾರಂಭಿಸಿ ಅಲ್ಲಿಯೇ ಪ್ರಜ್ಞೆ ತಪ್ಪುತ್ತಾನೆ. ಸುತ್ತಮುತ್ತ ಸೇರಿದ ನೂರಾರು ಜನ ರಾಜನ ಸ್ಥಿತಿಯನ್ನು ನೋಡಿ ಅನುಕಂಪ ಪಟ್ಟರೇ ವಿನಾ ಆತನನ್ನು ರಕ್ಷಿಸಲು ಮುಂದಾಗುವುದಿಲ್ಲ. ಹುಡುಗ ಹೊಲೇರ ಜಾತಿಯವನಾದುದರಿಂದ ಎಲ್ಲರ ಹೃದಯದಲ್ಲೂ ಕರುಣೆ ಸತ್ತಿರುತ್ತದೆ. ಇದನ್ನು ಗಮನಿಸಿದರೆ ಭಾರತದ ಸಂವಿಧಾನದಲ್ಲಿ ಹೇಳುವ ಜಾತ್ಯಾತೀತ, ವಿವಿಧತೆಯಲ್ಲಿ ಏಕತೆ, ಎಂಬಂತಹ ದೊಡ್ಡ ದೊಡ್ಡ ಪದಗಳು ಕೇವಲ ಘೋಷಣೆಗಳು ಮಾತ್ರ ಎಂಬುದರ ಅರಿವಾಗುತ್ತದೆ. ಹೀಗಾಗಿಯೇ ಭಾರತದಲ್ಲಿ ತೋರಿಕೆ ಮತ್ತು ವಾಸ್ತವತೆಯಂತಹ ಎರಡು ಮುಖಗಳಿವೆ. ತಲೆಗೆ ಬಿದ್ದ ಪೆಟ್ಟಿನಿಂದಾಗಿ ಕಾಯಿಲೆ ತೀವ್ರವಾಗಿ ರಾಜನನ್ನು ದೊಡ್ಡಾಸ್ಪತ್ರೆಗೆ ಸೇರಿಸಲಾಗುತ್ತದೆ. ಕಾಯಿಲೆ ಅಲ್ಲಿಯೂ ಗುಣಮುಖವಾಗದೆ ಬೆಂಗಳೂರಿನ ಮಾನಸಿಕ ಆಸ್ಪತ್ರೆಗೆ ಹೋಗಲು ತಿಳಿಸುತ್ತಾರೆ. ಅಲ್ಲಿಗೆ ಹೋಗುವಷ್ಟು ಚೈತನ್ಯಯ ಪುಟ್ಟಣ್ಣ, ಬಿಸಿಲನಲ್ಲಿ ಇರಲಿಲ್ಲವಾದ್ದರಿಂದ ಊರಿನ ಹಾದಿಯನ್ನು ಹಿಡಿಯುತ್ತಿರುತ್ತಾರೆ. ಬಸ್ಸಿನಲ್ಲಿ ಊರಿಗೆ ಬರುತ್ತಿರಬೇಕಾದರೆ ಮಾರ್ಗ ಮಧ್ಯದಲ್ಲಿ ರಾಜ ಕೊನೆಯುಸಿರೆಳೆಯುತ್ತಾನೆ. ಸತ್ತ ಹೆಣವನ್ನು ಬಸ್ಸಿನಲ್ಲಿ ತೆಗೆದುಕೊಂಡು ಸಾಧ್ಯವಿಲ್ಲವೆಂದು ಹೇಳಿ ಅವರನ್ನು ಕೆಳಗಿಳಿಸಲಾಗುತ್ತದೆ.

“ನಮ್ಮ ಜನ ತಮ್ಮ ಮೂಢ ನಂಬಿಕೆಗಳ ಪರಿಣಾಮವಾಗಿ ಹೃದಯಶೂನ್ಯರಾಗಿ, ಕಟುಕರಾಗುವುದನ್ನು ಈ ಸನ್ನಿವೇಶ ಹೇಳುತ್ತದೆ. ಮಗನ ಸಮಾಧಿಯ ಬಳಿ ನಿಂತು ಹೆಂಡತಿಗೆ ಬಿಸಿಲ ಹೇಳುವ ಮಾತುಗಳು ಬದುಕಿನ ಅತ್ಯಂತ ಸರಳ ಜೀವನತತ್ವ. ಅದಕ್ಕೂ ಮಿಗಿಲಾಗಿ ವಾಸ್ತವದ ದನಿ.

"ಲೇ! ಬಾರೆ ಎಂಗೆ ಬಂದ್ನೋ ಅಂಗೇ ಒಂಟೋದ, ನಾವೂ ಒಂದು ದಿನ ಸಾಯೋರೆ ಕನ, ನಂ ರಾಜನೇ ಪುಣ್ಯವಂತ ಕಣ ಬಾರೆ ನಾವು ಬದುಕೂ ಸತ್ತಂಗೆಯೇ; ಅವ್ನು ಸತ್ತು ಬದುಕುದಂಗೆ ಕನ!" ಕೋಟ್ಯಾಂತರ ಜನ ಬದುಕಿಯೂ ಸತ್ತಂತಿರುವುದನ್ನು ಬಿಸಿಲ ತನ್ನ ಜೀವನ ತತ್ವವೆಂಬಂತೆ ಹೇಳುತ್ತಾನೆ. ಮುಂದುವರಿದು ಬಿಸಿಲ, 'ಹಾಳು ಜವರಾಯ ಸೂಳೆ ಮಗನ್ಗೆ ಬಡವರು ಅಂದ್ರೆ ಬೋಸದ್ರ' ಎಂಬ ಈ ಮಾತು ಮುನುಷ್ಯನ ನಂಬಿಕೆಗಳೇ ಅಲುಗಾಡುತ್ತಿರುವ ಸತ್ಯದ ದನಿಗಳಾಗಿವೆ."[24]

ಕತೆಯ ಕೊನೆಯ ಹಂತದಲ್ಲಿ ಬಿಸಿಲ ಊಹಿಸಲಾರದಂತಹ ಘಟನೆ ನಡೆಯುತ್ತದೆ. ಪುಟ್ಟಣ್ಣನ ಬಲವಂತದಿಂದ ಪೋಲೀಸ್ ಸ್ಟೇಷನ್‌ಗೆ ಕಂಪ್ಲೇಂಟ್ ಕೊಡಲು ಹೋಗುತ್ತಾನೆ. ನನ್ನ ಮಗನ ಸಾವಿಗೆ ಕಾರಣರಾದವರನ್ನು ಶಿಕ್ಷಿಸಬೇಕೆಂದು ಬೇಡಿಕೊಳ್ಳುತ್ತಾನೆ. ಆದರೆ ಪೋಲೀಸ್ ಸ್ಟೇಷನ್‌ನಲ್ಲಿ ಮಗೂನ ನೀವೇ ಕತ್ತು ಹಿಚುಕಿ ಸಾಯ್ಸಿರಬೌದು. ಹೂತಿರುವ ಹೆಣ ಕಿತ್ತು ಪರೀಕ್ಷೆ ಮಾಡಿಸಬೇಕು ಎಂದು ಹೊರಟ ಪೋಲೀಸರು, ಪಟೇಲನ ಮೂಲಕ ಕಂಪ್ಲೇಂಟ್ ತರಲಿಲ್ಲವಾದ್ದರಿಂದ ನಿಮ್ಮ ಪಿತೂರಿಯೇ ಇದೆಂದು ಹೇಳಿ ಪುಟ್ಟಣ್ಣನನ್ನು ಲಾಕಪ್‌ನಲ್ಲಿ ಹಾಕುತ್ತಾರೆ. ಆ ಮೂಲಕ ತಾವು ನ್ಯಾಯ, ಧರ್ಮದ ಪಾಲಕರು ಎಂಬುದಕ್ಕಿಂತಲೂ ಹೆಚ್ಚಾಗಿ ಪಟೇಲರ ಕೈಗೊಂಬೆಗಳು ಎಂಬುದನ್ನು ಸಾಬೀತು ಮಾಡುತ್ತಾರೆ.

ಆಸ್ಪತ್ರೆಗಳೇ ಕಸಾಯಿಖಾನೆಗಳಾಗಿ, ವೈದ್ಯರೇ ಕಟುಕರಾಗುತ್ತಿರುವ ಇತ್ತೀಚಿನ ದಿನಗಳಲ್ಲಿ 'ಕರುಣಾಳು ಬಾ ಬೆಳಕೆ' ಕತೆ ಭವಿಷ್ಯದಲ್ಲಿಯೂ ವಾಸ್ತವತಾ ನೆಲೆಯಲ್ಲಿಯೇ ನಿಲ್ಲವಂತೆ ತೋರುತ್ತದೆ. ಇಲ್ಲಿನ 'ಕಸಾಯಿಖಾನೆ' ಎಂಬ ಪದವನ್ನು ಗಮನಿಸಬೇಕು. ಸಾಮಾನ್ಯವಾಗಿ ಕಸಾಯಿಖಾನೆಗೆ ತಳ್ಳುವಂತಹ ಹಸುಗಳು ಬಡಕಲಾಗಿರುತ್ತವೆ. ಇಂದಿನ ಸ್ವಾರ್ಥ ಪ್ರಪಂಚದಲ್ಲಿಯೂ ಅಷ್ಟೇ

ಬಡವರೆ ಬಲಿಪಶುಗಳು. ಸೇವಾಕ್ಷೇತ್ರವಾಗಬೇಕಿದ್ದ ವೈದ್ಯಲೋಕ ವಾಣಿಜ್ಯೀಕರಣಗೊಂಡಾಗ ಉಂಟಾಗುವ ಪರಿಣಾಮವೇ ಬಡವರ ಮಾರಣಹೋಮ. ಮಂಡ್ಯದ ಒಂದು ಹಳ್ಳಿಯಿಂದ ಗರ್ಭಿಣಿ ಹುಡುಗಿಯನ್ನು ಕರೆದುಕೊಂಡು ಬಂದ ಮರಿಸಿದ್ದೇಗೌಡನ ಕುಟುಂಬ ನಗರದ ಆಸ್ಪತ್ರೆಯ ವಾತಾವರಣದಲ್ಲಿ ಅನುಭವಿಸಿದ ನರಕಯಾತನೆ ಹೆರಿಗೆಯ ನೋವಿಗೂ ಮಿಗಿಲಾದದ್ದು, ಒಬ್ಬರನ್ನು ನೋಡಿ ಮತ್ತೊಬ್ಬ ಮರುಕಪಟ್ಟರೆ ಅವನನ್ನು ಹೆಂಗರುಳು ಎಂದು ಹೇಳುವುದು ಈ ನೆಲದ ಸಂಪ್ರದಾಯ. ಅಂತಹುದರಲ್ಲಿ ಇಬ್ಬರು ಮಹಿಳಾ ವೈದ್ಯರು ಗರ್ಭಿಣಿ ಹೆಣ್ಣೊಬ್ಬಳನ್ನು ಸಾಯಿಸಿದ ರೀತಿಯಂತೂ ಹೆಣ್ತನಕ್ಕೆ ಹೊರತಾದುದು.

ಗರ್ಭಿಣಿ ಸರೋಜಳನ್ನು ಹೆರಿಗೆಯ ಕಾರಣವಾಗಿ ನಗರದ ಸರ್ಕಾರಿ ಆಸ್ಪತ್ರೆಗೆ ಸೇರಿಸಲಾಗುತ್ತದೆ. ಆಸ್ಪತ್ರೆಯಲ್ಲಿ ಈಕೆಗೆ ರಕ್ತದ ಅವಶ್ಯಕತೆಯಿರುವುದು ತಿಳಿದುಬರುತ್ತದೆ. ಆ ನಂತರದ ಆಸ್ಪತ್ರೆಯ ವಾತಾವರಣದಲ್ಲಿ ಬಿಚ್ಚಿಕೊಳ್ಳುವ ಭ್ರಷ್ಟ, ರಾಕ್ಷಸಮುಖಗಳು ಹಲವು ಬಾಗಿಲನ್ನು ಕಾಯುವ ವಾಚ್‌ಮನ್‌ನಿಂದ ಹಿಡಿದು ದೊಡ್ಡ ಡಾಕ್ಟರ್‌ಗಳೆನ್ನಿಸಿಕೊಂಡ ನೀಳಾದೇವಿ, ಪ್ರಮೀಳಾದೇವಿ, ಡಾ॥ ಈಶ್ವರ್ ಹೀಗೆ ಧನಪಿಶಾಚಿಗಳ ಸಾಲು ಸಾಲೇ ಕಣ್ಣೆದುರು ಹಾದು ಹೋಗುತ್ತದೆ.

"ತಾಯಿ ಇಲ್ಲಿ ಎಂಟು ನೂರು ರೂಪಾಯಿ ಅದೆ ತಗೊಳ್ಳಿ ನಿಮ್ಮ ದಮ್ಮಯ್ಯ ನನ್ ಮಗಳ ಪ್ರಾಣ ಉಳಿಸಿ ಎಂದು ಗೋಗರೆದ, ಸರ್ದಾರ್ ಗರ್ಜಿಸಿದ! ಸಾಫಿರ ಇಲ್ದೆ ಅಮ್ಮಾವ್ರ ನಾನು ಕಳ್ಸೋದಿಲ್ಲ ಬೇರೆ ಕಡೆ ಆದ್ರೆ ಎರಡು ಮೂರು ಆಗೋ ಕೇಸು ಇದು. ದೊಡ್ಡಮ್ಮಾವರು ಹೇಳಿದರು: ಪರವಾಗಿಲ್ಲ ಬಿಡು ಸರ್ದಾರ್, ನಾಳೆ ಕೊಡ್ತಾರೆ. ದುಡ್ಡು ಮುಖ್ಯ ಅಲ್ಲ ಡಾಕ್ಟ್ರು ಅಂದಮ್ಯಾಲೆ ಕರುಣೆ ಇರಬೇಕು. ಎಲ್ಲ ಸುಲೀತಾರೆ ಅಂತ ನಾವೂ ಸುಲಿಯೋದ? ನೋಡ್ರಪ್ಪ ಈಗ ನೀವು ನಡೀರಿ ನಾನು ಇನ್ನೊಂದು ಐದು ನಿಮಿಷದಲ್ಲಿ ಬಂದು ಬಿಡ್ತೀನಿ ಎಂದುಕ್ಕ ಎಂಟು ನೂರು ರೂಪಾಯಿಗಳನ್ನು ಎಣಿಸಿ ಚೀಲಕ್ಕೆ ಹಾಕಿಕೊಂಡ"[25] ಡಾ॥ ಪ್ರಮೀಳಾದೇವಿ ತಕ್ಷಣದಲ್ಲಿ ಬಂದ ಭಾರತ್ ಅಗರ ಬತ್ತಿ ಮಾಲೀಕರ ಕರೆಗೆ ಮನ್ನಣೆ ನೀಡಿ ಅವರ

ಮಗಳಿಗೆ ಸಿಸೇರಿಯನ್ ಮಾಡಲು ಹೊರಟಿದ್ದೇ ಅಲ್ಲದೆ ನೀಳಾದೇವಿಯನ್ನು ಕರೆಯಿಸಿಕೊಂಡದ್ದು ಶ್ರೀಮಂತರ ಬಗೆಗೆ ಅವರಿಗಿರುವ ಕಾಳಜಿಯನ್ನು ಬಡವರ ಬಗೆಗಿನ ತಿರಸ್ಕಾರವನ್ನು ಎತ್ತಿ ತೋರುತ್ತದೆ. ಸರೋಜಳ ದೇಹಕ್ಕೆ ಹೊಂದುವ ರಕ್ತ ಪ್ರಮೀಳಾದೇವಿಯ ನರ್ಸಿಂಗ್ ಹೋಂನಲ್ಲಿಯೇ ಇದ್ದರೂ ಆಕೆಯನ್ನು ಉಳಿಸುವ ಸಣ್ಣ ಪ್ರಯತ್ನವನ್ನು ಮಾಡುವುದಿಲ್ಲ.

'ನೇತ್ರ ದರೋಡೆಕೋರನಾದ ಡಾ॥ ಈಶ್ವರ್‌ನನ್ನು 'ನೇತ್ರ ಸಂರಕ್ಷಕ' ಎಂಬ ಬಿರುದು ನೀಡಿರುವ ಸರ್ಕಾರದ ಪ್ರಶಸ್ತಿಗಳ ಪ್ರಾಮಾಣಿಕತೆಯನ್ನು ಕತೆಯಲ್ಲಿ ಪ್ರಶ್ನಿಸಲಾಗಿದೆ. ಮರಿಸಿದ್ದೇಗೌಡ, ರಾಮೇಗೌಡರ ಮುಗ್ಧತೆ, ಅಜ್ಞಾನ, ಬಡತನವನ್ನೇ ಬಂಡವಾಳವನ್ನಾಗಿಸಿಕೊಂಡು ಈಶ್ವರ್ ತಮಗೆ ಬೇಕಾದಂತೆ ಅವರನ್ನು ಸುಲಿಗೆ ಮಾಡುತ್ತಾರೆ. ಹಣದಾಹ, ಅವಾರ್ಡ್‌ನ ಚಪಲದಿಂದಾಗಿ ಸರೋಜನ ಕಣ್ಣುಗಳನ್ನು ಕಿತ್ತು ಕಳ್ಳನೊಬ್ಬನಿಗೆ ಜೋಡಿಸುತ್ತಾರೆ. ಇವರ ಸುಲಿಗೆ ಎಷ್ಟರ ಮಟ್ಟಕ್ಕೆ ಏರುತ್ತದೆಯೆಂದರೆ ಸರೋಜಳ ಕತ್ತಿನಲ್ಲಿದ್ದ ಮಾಂಗಲ್ಯ ಸರವನ್ನು ಅಪಹರಿಸುತ್ತಾರೆ. ಕತೆಯ ಕೊನೆಯಲ್ಲಿ ರಾಮೇಗೌಡ ಹೇಳುವ ಮಾತು ಇವರ ವ್ಯಕ್ತಿತ್ವಕ್ಕೆ ಅರ್ಥಪೂರ್ಣವಾಗಿ ಒಪ್ಪುತ್ತದೆ.

"ನಾವು ಉರಿದು ತಿನ್ನೋದು ಆಡು, ಕುರಿ, ಕೋಳಿ, ರಕ್ತಾ ಸ್ವಾಮಿ; ಮನುಷ್ಯರ ರಕ್ತಾನಲ್ಲಾ!"[26]

ಇಂಥ ನರರಾಕ್ಷಸರ ನಡುವೆ ಕರುಣಾಳು ಬೆಳಕು ಬರುವುದಾದರೂ ಎಂತು? ಎಂಬುದೇ ರಾಮಣ್ಣನವರನ್ನು ಕಾಡುತ್ತಿರುವ ಪ್ರಶ್ನೆಯಾಗಿದೆ. ಭಾರತದಂತಹ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಬಡಜನತೆಯನ್ನು ಕಿತ್ತುತಿನ್ನುವ ರಣಹದ್ದುಗಳದ್ದೇ ಕಾರುಬಾರಾದದ್ದು ಈ ದೇಶದ ದುರಂತ.

## ಅಡಿಟಿಪ್ಪಣಿಗಳು

1. ಎಚ್.ಎಸ್. ರಾಘವೇಂದ್ರರಾವ್ : ಪ್ರಗತಿಶೀಲತೆ ; ಪುಟ : 24
2. ಬೆಸಗರ ಹಳ್ಳಿ ರಾಮಣ್ಣ : ಕನ್ನಂಬಾಡಿ ಮುನ್ನುಡಿ : 21
3. ಅದೇ : ಪುಟ : 59
4. ಅದೇ : ಪುಟ : 52
5. ಅದೇ : ಪುಟ : 20
6. ಅದೇ : ಮುನ್ನುಡಿ ಪುಟ : 20
7. ಡಾ. ಎಲ್. ಹನುಮಂತಯ್ಯ : ಕಥಾಕಥನ ; ಪುಟ : 48
8. ಅದೇ : ಪುಟ : 49
9. ಬೆಸಗರ ಹಳ್ಳಿ ರಾಮಣ್ಣ : ಕನ್ನಂಬಾಡಿ : 261
10. ಅದೇ : ಪುಟ : 292
11. ಅದೇ : ಪುಟ : 263
12. ಡಾ. ಎಲ್. ಹನುಮಂತಯ್ಯ : ಕಥಾಕಥನ ; ಪುಟ : 49
13. ಬೆಸಗರ ಹಳ್ಳಿ ರಾಮಣ್ಣ : ಕನ್ನಂಬಾಡಿ : 392
14. ಅದೇ : ಪುಟ : 345
15. ಅದೇ : ಪುಟ : 347
16. ಶಿವರಾಮು ಕಾಡನಕುಪ್ಪೆ : ಕುವೆಂಪು ಸಾಹಿತ್ಯ ವಿಚಾರ ; ಪುಟ : 108
17. ಬೆಸಗರಹಳ್ಳಿ ರಾಮಣ್ಣ : ಕನ್ನಂಬಾಡಿ ; ಪುಟ : 268
18. ಅದೇ ; ಪುಟ : 268
19. ಅದೇ ; ಪುಟ : 270
20. ಅದೇ ; ಪುಟ : 268
21. ಅದೇ ; ಪುಟ : 272
22. ಎಲ್. ಹನುಮಂತಯ್ಯ : ಕಥಾಕಥನ ; ಪುಟ : 46
23. ಬೆಸಗರಹಳ್ಳಿ ರಾಮಣ್ಣ : ಕನ್ನಂಬಾಡಿ ; ಪುಟ : 276
24. ಎಲ್. ಹನುಮಂತಯ್ಯ : ಕಥಾಕಥನ ; ಪುಟ : 76

25. ಬೆಸಗರಹಳ್ಳಿ ರಾಮಣ್ಣ : ಕನ್ನಂಬಾಡಿ ; ಪುಟ : 406

26. ಅದೇ ; ಪುಟ : 420

# 7. ಉಪಸಂಹಾರ

ಕನ್ನಡದಲ್ಲಿ ಕಥಾಸಾಹಿತ್ಯವು ವಿಪುಲವೂ, ವೈವಿಧ್ಯವೂ, ಉತ್ಕೃಷ್ಟವೂ ಆಗಿ ಬೆಳೆದಿದೆ. ಮಾಸ್ತಿ, ಆನಂದ, ಕುವೆಂಪು, ನಿರಂಜನ, ಪೂರ್ಣಚಂದ್ರತೇಜಸ್ವಿ, ದೇವನೂರು ಮಹಾದೇವ, ಕುಂ.ವೀರಭದ್ರಪ್ಪ, ಬೆಸಗರಹಳ್ಳಿ ರಾಮಣ್ಣ ಮೊದಲಾದ ಸಾಹಿತಿಗಳು ಉತ್ತಮವಾದ ಕತೆಗಳನ್ನು ರಚಿಸಿದ್ದಾರೆ. ಬೆಸಗರಹಳ್ಳಿ ರಾಮಣ್ಣನವರ ಹೆಸರು ಸಣ್ಣಕತೆಗಳೊಂದಿಗೆ ಬೆಸೆದುಕೊಂಡಿದೆ. ರಾಮಣ್ಣನವರು ಮೂಲತಃ ಒಬ್ಬ ಮಾನವತಾವಾದಿ. ಬದುಕಿನ ನಿಜಮೌಲ್ಯಗಳನ್ನು ಪ್ರೀತಿಸುವ ಯಾರಿಗಾದರೂ ಅವರ ಕತೆಗಳು ಬೇಸರವನ್ನುಂಟು ಮಾಡುವುದಿಲ್ಲ. ಇನ್ನೂ ವೈಚಾರಿಕ ಆವರಣದ ತೆಕ್ಕೆಗೊಳಪಡದ ಗ್ರಾಮೀಣ ಬದುಕಿನ ಕಚ್ಚಾ ಅನುಭವಗಳು ಇವರ ಕತೆಗಳಲ್ಲಿ ಮಡುಗಟ್ಟಿ ನಿಂತಿದೆ. ಗ್ರಾಮೀಣವಸ್ತು, ಭಾಷೆ, ಸಂಸ್ಕೃತಿ ರಾಮಣ್ಣನವರ ಕತೆಗಳ ಜೀವನಾಡಿಗಳಾಗಿವೆ. ಅದರಲ್ಲೂ ವ್ಯವಸಾಯ ಪ್ರಧಾನವಾದ ಮಂಡ್ಯ ಜಿಲ್ಲೆಯ ಮಣ್ಣಿನ ವಾಸನೆ ಇವರ ಕತೆಗಳ ಭೂಮಿಕೆಯಾಗಿದೆ. ಇವರು ಬರೆಯುವ ಕತೆಗಳು ಯಾವ ಸಂದರ್ಭದಲ್ಲಿ ಹೇಗೆ ಸ್ಫೋಟಗೊಳ್ಳುತ್ತವೆ, ತಮ್ಮ ಅನಿವಾರ್ಯತೆಯನ್ನು ಪ್ರಕಟಪಡಿಸುತ್ತವೆ ಎಂದು ಹೇಳಲು ಸಾಧ್ಯವಾಗದಂತಹ ಸನ್ನಿವೇಶದಲ್ಲಿ ಹಠಾತ್ತಾಗಿ ಜೀವತಳೆದು ನಿಂತು ಬಿಡುತ್ತವೆ. ನಮ್ಮ ನಡುವೆಯೇ ಪಕ್ಕದ ಮನೆಯಲ್ಲೇ ಕತೆಯ ಆವರಣ ಇದೆ ಎಂಬಂತೆ, ಕ್ಷಣಕ್ಷಣಕ್ಕೂ ಅದರೊಳಗೆ ಇಳಿಯುತ್ತಿರುವಂತೆ ಅನುಭವವಾಗುತ್ತದೆ.

ರಾಮಣ್ಣನವರು ಚಿತ್ರಿಸುವ ಗ್ರಾಮೀಣ ಬದುಕಿನಲ್ಲಿ ತಾತ್ಕಾಲಿಕವಾಗಿ ಸಂಘರ್ಷಗಳು ಏರ್ಪಡುತ್ತವೆಯಾದರೂ ಅಂತಿಮವಾಗಿ ಕೂಡಿ ಬಾಳಿದರೆ ಸ್ವರ್ಗಸುಖ ಎಂಬ ತತ್ವದೆಡೆಗೆ ತುಡಿಯುತ್ತದೆ. ಈ ಸಂದರ್ಭದಲ್ಲಿ ರಾಮಣ್ಣನವರ ಮೇಲೆ ಗಾಂಧೀಜಿಯ ತತ್ವಗಳ ಪ್ರಭಾವವಿರುವುದನ್ನು ಗುರುತಿಸಬಹುದಾಗಿದೆ. ಹೀಗೆ ಸಂಘರ್ಷದಿಂದ ಸಾಮರಸ್ಯದೆಡೆಗೆ ಸಾಗುವ ಹಾದಿಯಲ್ಲಿ ಗ್ರಾಮೀಣ ಬದುಕಿನ ಹಲವು ಸೂಕ್ಷ್ಮಗಳು ತೆರೆದುಕೊಳ್ಳುತ್ತವೆ. ಎಪ್ಪತ್ತರ ದಶಕದ ಭಾರತದಲ್ಲಿ ಸಾಮಾಜಿಕವಾಗಿ, ರಾಜಕೀಯವಾಗಿ, ಸಾಹಿತ್ಯಿಕವಾಗಿ ಹಲವಾರು ಪ್ರಮುಖ

ಘಟನೆಗಳು ಜರುಗಿದವು. ಈ ಘಟನೆಗಳು ಹಳ್ಳಿಗಳ ಮೇಲೆ ಉಂಟು ಮಾಡಿದ ಪರಿಣಾಮವನ್ನು ರಾಮಣ್ಣನವರು ಗುರುತಿಸುತ್ತಾರೆ. ರಾಮಣ್ಣನವರು ಹಳ್ಳಿಗಳ ಮೇಲೆ ಅಪಾರವಾದ ಪ್ರೀತಿ, ಅಭಿಮಾನವನ್ನು ಹೊಂದಿರುವರಾದರೂ ಅಲ್ಲಿಯ ಜಾತೀಯತೆ, ಜಮೀನ್ದಾರಿಕೆಯ ದೌರ್ಜನ್ಯಗಳನ್ನು ಉಗ್ರವಾಗಿ ಖಂಡಿಸುತ್ತಾರೆ. ಭಾರತದ ಬಡತನ ಹಸಿವುಗಳಿಗೆ ಇಲ್ಲಿಯ ಭ್ರಷ್ಟಾಚಾರ, ಅಸಮಾನತೆ, ಸ್ವಾರ್ಥರಾಜಕಾರಣ, ಅಧಿಕಾರಿಗಳ ಗೋಸುಂಬೆತನವೇ ಕಾರಣವೆಂದು ಚಡಪಡಿಸುತ್ತಾರೆ. ಹೀಗಾಗಿಯೆ ರಾಮಣ್ಣನವರ ಆರಂಭದ ಕತೆಗಳಲಿ ಭಾವುಕತೆ ಪ್ರಕಟಗೊಂಡರೆ ನಂತರದ ಕತೆಗಳಲ್ಲಿ ಸಾಮಾಜಿಕ ಕ್ರೌರ್ಯಗಳು ಬೆತ್ತಲುಗೊಳ್ಳುತ್ತವೆ. ಆ ಮೂಲಕ ಸಾಮಾಜಿಕ ಬದಲಾವಣೆಯ ಸಂದರ್ಭದಲ್ಲಿ ಬಂಡಾಯದ ಅನಿವಾರ್ಯತೆಯನ್ನು ಸಮರ್ಥಿಸುತ್ತಾರೆ. ಸಾಮಾಜಿಕ ಬದಲಾವಣೆಗೆ ಎಂದರೆ ಶೋಷಿಸುವ ವ್ಯವಸ್ಥೆಯನ್ನು ಕಿತ್ತುಹಾಕಿ ಶೋಷಣಾರಹಿತ ವ್ಯವಸ್ಥೆಯನ್ನು ಕಟ್ಟುವುದು. ಈ ಹೊಸ ವ್ಯವಸ್ಥೆಯಲ್ಲಿ ಮೇಲು ಕೀಳಿಲ್ಲ, ದಬ್ಬಾಳಿಕೆಯಿಲ್ಲ; ಅಲ್ಲಿ ಮನುಷ್ಯತ್ವಕ್ಕೆ ಮಾತ್ರ ಬೆಲೆ. ಮಾನವ ಮೌಲ್ಯಗಳಿಗೆ ಮರ್ಯಾದೆ. ಮಾನವೀಯ ಮೌಲ್ಯಗಳು ಕುಸಿಯುತ್ತಿರುವ ಇತ್ತೀಚಿನ ದಿನಗಳಲ್ಲಿ ಅದನ್ನು ಬದುಕಿನ ಅನಿವಾರ್ಯವೆಂದು ವಾದಿಸುವುದು ಬಹುಶಃ ರಾಮಣ್ಣನಂತಹ ಶ್ರೇಷ್ಠದರ್ಜೆಯ ಲೇಖಕರಿಂದ ಮಾತ್ರ ಸಾಧ್ಯ. ಹೀಗೆ ಮಾನವೀಯತೆಯ ಹುಡುಕಾಟದಲ್ಲಿ ತೊಡಗಿದ್ದ ರಾಮಣ್ಣನವರು ತಮ್ಮ ಕತೆಗಳ ಮೂಲಕ ಗ್ರಾಮಜೀವನದ ಹಲವು ಸೂಕ್ಷ್ಮಗಳನ್ನು ಸುಂದರವಾಗಿ, ವಾಸ್ತವತಾನೆಲೆಯಲ್ಲಿ ಕಲಾತ್ಮಕವಾಗಿ ಸೆರೆಹಿಡಿದಿದ್ದಾರೆ.

# ಗ್ರಂಥ ಸೂಚಿ


1. **ಬೆಸಗರಹಳ್ಳಿ ರಾಮಣ್ಣ : ಕನ್ನಂಬಾಡಿ**
ಪಲ್ಲವಿ ಪ್ರಕಾಶನ
ಕೆ.ಆರ್. ರಸ್ತೆ
ಸುಭಾಷ್‌ನಗರ
ಮಂಡ್ಯ 571401
ಮೊದಲ ಮುದ್ರಣ – 1986

2. **ಕೆ.ಡಿ. ಕುರ್ತಕೋಟಿ : ಯುಗಧರ್ಮ ಹಾಗೂ ಸಾಹಿತ್ಯದರ್ಶನ**
ಮನೋಹರ ಗ್ರಂಥಮಾಲಾ,
ಧಾರವಾಡ
ಮೊದಲ ಮುದ್ರಣ – 1962

3. **ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ**
ಸಮಾಜ ಪುಸ್ತಕಾಲಯ
ಧಾರವಾಡ
ದ್ವಿತೀಯ ಮುದ್ರಣ – 1996

4. **ಎಲ್. ಹನುಮಂತಯ್ಯ : ಕಥಾಕಥನ**
ಸಿ.ವಿ.ಜಿ. ಪಬ್ಲಿಕೇಷನ್ಸ್
ಬೆಂಗಳೂರು
ಪ್ರಥಮ ಮುದ್ರಣ – 1999

5. **ಎಚ್. ಎಸ್. ರಾಘವೇಂದ್ರರಾವ್ : ಪ್ರಗತಿಶೀಲತೆ**
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು
ಮೊದಲ ಮುದ್ರಣ – 1990

6. **ಕೃಷ್ಣಪ್ಪ : ಅರಕೆರೆ; ಸಾಹಿತ್ಯ, ಸಂಸ್ಕೃತಿ ಅಧ್ಯಯನ**

7. **ಎನ್. ಕೆ. ಕೋದಂಡರಾಮ : ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ**